ನನ್ನ ಜನ್ಮದಿನಕ್ಕೊಂದು
ಹೊಸ ಪುಸ್ತಕ

ಆದೊಂದು
**ಯೂಕೊಬ್ಯಾಂಕ್**
ಪಾಸ್ ಬುಕ್



ಹಲವಾರು ಉಪಹಾರಗಳನ್ನು ತರಬಲ್ಲ ಒಂದು ಉಪಹಾರ. ಅದು ಯಾವುದು ಗೊತ್ತೇ? ನನ್ನ ಯೂಕೊಬ್ಯಾಂಕ್ ಪಾಸ್ ಬುಕ್

ಅಮ್ಮಾ, ನಿನ್ನ ಈ ಸುವಿಚಾರಕ್ಕಾಗಿ 'ಧನ್ಯವಾದಗಳು'. ನನ್ನ ಅಲ್ಪ ಉಳಿತಾಯವನ್ನು ಬಹುಗುಣವಾಗಿಸಿದ್ದಕ್ಕೆ ಯೂಕೊಬ್ಯಾಂಕ್, "ನಿನಗೂ ಧನ್ಯವಾದಗಳು."

UCO/CAS-69/80 KAN



**ಯುನೈಟೆಡ್ ಕಮರ್ಶಿಯಲ್ ಬ್ಯಾಂಕ್**
ಅಕ್ಕಪಕ್ಕದಲ್ಲಿರುವ ಸೌಕರ್ಯ ನೀಡುವ ಬ್ಯಾಂಕ್



# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

"ಬಾಯಿ ಇದ್ದರೆ ಮಗ ಬದುಕಿಯಾನು", "ಮಾತು ಆಡಿದರೆ ಹೋಯಿತು. ಮುತ್ತು ಒಡೆದರೆ ಹೋಯಿತು" ಎಂದು ಮುಂತಾಗಿ ಮಾತಿಗೆ ಸಂಬಂಧಿಸಿದ ಗಾದೆಗಳು. ನಾಲಗೆಗೆ ಕೆಟ್ಟ ಮಾತುಗಳದೇ ಅಭ್ಯಾಸವಾಗಿಬಿಟ್ಟರೆ, ಯೋಚನೆಗೆ ಅವಕಾಶವಿಲ್ಲದೆ ಅಂಥ ಮಾತುಗಳೇ ಹೊರಟು ಇತರರನ್ನು ನೋಯಿಸುತ್ತವೆ. ಒಳ್ಳೆಯ ಮಾತುಗಳು ಎಲ್ಲರನ್ನೂ ಹರ್ಷಗೊಳಿಸುತ್ತವೆ. ಈ ಮಾತುಗಳು ಮನಸ್ಸಿಗೆ ತೋರುವಂತೆ ಈ ಸಂಚಿಕೆಯಲ್ಲಿ ಒಂದು ಕಥೆ ಇದೆ. ಅದು ಯಾವ ಕಥೆಯೆಂಬುದು ಓದುತ್ತಾ ಹೋದರೆ ನಿಮಗೇ ಗೊತ್ತಾಗುತ್ತದೆ.

## ಅಮರವಾಣಿ

ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ
ನ ಹಿ ಸಿಂಹಸ್ಯ ಸುಪ್ತಸ್ಯ ಪ್ರವಿಶಂತಿ ಮುಖೇ ಮೃಗಾಃ

ಬಯಕೆಗಳು ಇದ್ದಮಾತ್ರದಿಂದಲೇ ಫಲಿಸಿಬಿಡುವುದಿಲ್ಲ. ಅದಕ್ಕೆ ಪ್ರಯತ್ನಬೇಕು. ನಿದ್ರಿಸುವ ಸಿಂಹದ ಬಾಯಿಯೊಳಗೆ ಮೃಗಗಳು ತಾವಾಗಿ ಪ್ರವೇಶಿಸಲಾರವು.

ಸಂಪುಟ : ೭೫ ಅಕ್ಟೋಬರ್ '೮೦ ಸಂಚಿಕೆ : ೪

ಬಿಡಿ ಪ್ರತಿ ರೂ. ೧–೫೦ : : ವಾರ್ಷಿಕ ಚಂದಾ ರೂ. ೧೮-೦೦

CHITRA



# ಪ್ರಶ್ನೋತ್ತರಗಳು

**ಸಾಮವೇದಂ ಶ್ರೀನಿವಾಸ ಅನಂತರವಿ**

ಪ್ರ: ರಾಕೆಟ್ ನಿರ್ಮಾಣವನ್ನೂ, ಅದು ಕೆಲಸ ಮಾಡುವ ವಿಧವನ್ನೂ ಕುರಿತು ಸ್ವಲ್ಪ ತಿಳಿಯಬೇಕೆಂದು ಕುತೂಹಲವಾಗಿದೆ. ನಮಗೆಲ್ಲಾ ಅರ್ಥವಾಗುವಂತೆ ಸಾಧ್ಯವಿರುವಷ್ಟು ವಿವರಿಸಿ ತಿಳಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ಉ: ನಾವು ದೀಪಾವಳಿಯ ದಿನ ಸುಡುತ್ತ ಸಂತೋಷಪಡುವ ಸರಂಜಾಮುಗಳಲ್ಲಿ ರಾಕೆಟ್ ಕೂಡಾ ಇರುತ್ತದೆ. ಅದು ಕೆಲಸ ಮಾಡುವ ಸೂತ್ರವನ್ನು ಅರ್ಥಮಾಡಿಕೊಳ್ಳುವುದು ಅಷ್ಟೇನೂ ಕಷ್ಟವಿಲ್ಲ. ಸಣ್ಣ ಉದಾಹರಣೆ ತೆಗೆದುಕೊಳ್ಳಿ. ನಾವು ದೋಣಿಯಲ್ಲಿ ಪ್ರಯಾಣಿಸುವಾಗ ಹುಟ್ಟು ಹಾಕಿ ನೀರನ್ನು ಹಿಂದಕ್ಕೆ ತಳ್ಳಿದರೆ ದೋಣಿ ಮುಂದಕ್ಕೆ ಹೋಗುವುದು ನಮಗೆ ಗೊತ್ತಿದೆ. ಅದರಂತೆಯೇ ದೀಪಾವಳಿಯ ರಾಕೆಟ್‌ಗಳಲ್ಲಿ ಕೆಳಗಿನ ಭಾಗದಿಂದ "ಹೊಗೆ"ಗೆ ಉಂಟಾಗುವ ಪ್ರತಿಶಕ್ತಿ ರಾಕೆಟ್ಟನ್ನು ಮೇಲಕ್ಕೆ ತಳ್ಳುತ್ತದೆ. ಅದು ಉರಿದುಕೊಂಡು ವಾಯು ರೂಪವನ್ನು ಹೊಂದುತ್ತದೆ. ಅದರೊಂದಿಗೆ ರಾಕೆಟ್ಟಿನ ಒಳಭಾಗದಲ್ಲಿ ಅಪಾರವಾದ ಒತ್ತಡವು ಏರ್ಪಟ್ಟು, ವಾಯು ರೂಪವನ್ನು ಧರಿಸಿದ ಇಂಧನವನ್ನು ಜೋರಿನಿಂದ ಹೊರಕ್ಕೆ ತಳ್ಳುತ್ತದೆ.

ಜೆಟ್ ವಿಮಾನಗಳಲ್ಲಿ ಜೆಟ್ ಇಂಜನ್‌ಗಳು ಕೂಡಾ ಇದೇ ಸೂತ್ರದ ಮೇಲೆ ಕೆಲಸ ಮಾಡುತ್ತವೆ. ಆದರೆ ನಿಜವಾದ ರಾಕೆಟ್ಟಿಗೂ ಜೆಟ್ ವಿಮಾನಗಳಿಗೂ ಕೆಲವು ವ್ಯತ್ಯಾಸಗಳಿವೆ. ಅವೆರಡರ ಕೆಲಸವೂ ಬೇರೆ ಬೇರೆಯಾದುದರಿಂದ, ಆ ವಿಷಯ ಈಗ ಇಲ್ಲಿ ಅಗತ್ಯವಿಲ್ಲ.

ರಾಕೆಟ್ಟಿಗೆ ಉಪಯೋಗಿಸಲ್ಪಡುವ ಇಂಧನವು ದ್ರವ ರೂಪದಲ್ಲಾಗಲೀ, ಘನ ರೂಪದಲ್ಲಾಗಲೀ ಇರಬಹುದು. ಇತ್ತೀಚೆಗೆ "ರೋಹಿಣಿ" ನಾಮಾಂಕಿತವಾದ ಉಪಗ್ರಹವನ್ನು ಶ್ರೀಹರಿಕೋಟದಿಂದ ಪ್ರಯೋಗಿಸಿದಾಗ ಘನರೂಪದಲ್ಲಿರುವ ಇಂಧನಗಳನ್ನೇ ಬಳಸಿದ್ದಾರೆ.

ಈ ಬಗೆಯ ಇಂಧನಗಳು ಶೂನ್ಯಾಕಾಶದಲ್ಲಿ ಕೂಡಾ ದಹನವಾಗಬೇಕಾದರೆ ಗಾಳಿಯಲ್ಲಿರುವ ಪ್ರಾಣವಾಯುವಿನ ಮೇಲೆ ಆಧಾರಪಟ್ಟರೆ ನಡೆಯಲಾರದು. ಏಕೆಂದರೆ ಅಂತರಿಕ್ಷದಲ್ಲಿ ಗಾಳಿ ಇರುವುದಿಲ್ಲ. ಆದುದರಿಂದ ರಾಕೆಟ್ಟನ್ನು ಚಾಲಿಸಲು ಸಾಧಾರಣವಾಗಿ ಎರಡು ಬಗೆಯ ಇಂಧನಗಳಿರುತ್ತವೆ.

ಅವೇನೆಂದರೆ ಒಂದು ಉರಿಯುತ್ತಿರುವಂತಹುದು; ಇನ್ನೊಂದು ಉರಿಸುವಂತಹುದು, ಅಂದರೆ ಪ್ರಾಣವಾಯುವೇ. ಸಾಧಾರಣವಾಗಿ ಪ್ರಾಣವಾಯು ದ್ರವರೂಪದಲ್ಲೇ ಇರುತ್ತದೆ. ಶೀತೋಷ್ಣಗಳ ಸಾಧಾರಣ ಪರಿಸ್ಥಿತಿಯಲ್ಲಿ ಪ್ರಾಣವಾಯು ವಾಯುರೂಪವಾಗಿರುವುದರಿಂದ ಅದನ್ನು ದ್ರವರೂಪ ಮಾಡಲು ತುಂಬಾ ತಣ್ಣಗಾಗಿಸಬೇಕು.

ವಾಯುರೂಪ ಪಡೆದ ಇಂಧನವು ಅತ್ಯಂತ ವೇಗಶಕ್ತಿಯಿಂದ ಹೊರಗೆ ಬಂದ ಹೊರತು ರಾಕೆಟ್ ವೇಗವನ್ನು ಪಡೆದುಕೊಳ್ಳುವುದಿಲ್ಲ. ಇಂಧನ ಶಕ್ತಿಗೆ ತಕ್ಕಹಾಗೆ ಒಂದು ರಾಕೆಟ್ ಸಾಲದೆ ಹೋದರೆ ಮೂರು-ನಾಲ್ಕು ರಾಕೆಟ್‌ಗಳ ಅಂಚೆಯ ಕ್ರಮವಾಗುವಂತೆ ಉಪಯೋಗಿಸುತ್ತಾರೆ. "ರೋಹಿಣಿ"ಗೆ ನಾಲ್ಕು ರಾಕೆಟ್ ಅಂಚೆಗಳನ್ನು ಹೊಂದಿಸಿದ್ದಾರೆ.



## ೮೭

### ಹಂಸರಾಜ–ನವಿಲುರಾಜ

ಪ್ರಪಂಚವನ್ನು ಬಳಸಿರುವ ಸಮುದ್ರದ ಉತ್ತರ ದಿಕ್ಕಿನಲ್ಲಿ ಕರ್ಪೂರ ದ್ವೀಪವಿದೆ. ಆ ದ್ವೀಪದಲ್ಲಿರುವ ಪದ್ಮಕೇಳಿ ಎಂಬ ಸರೋವರದಲ್ಲಿ ಹಿರಣ್ಯ ಗರ್ಭ ವೆಂಬ ರಾಜಹಂಸವಿದ್ದಿತು. ನೀರುಪಕ್ಷಿಗಳಿಗೆಲ್ಲಾ ಅದೇ ರಾಜ. ಅದು ತನ್ನ ಪ್ರಜೆಗಳಾದ ಪ್ರಪಂಚದ ಎಲ್ಲಾ ಬಗೆಯ ನೀರುಪಕ್ಷಿಗಳನ್ನೂ ರಕ್ಷಿಸುತ್ತ ಅವುಗಳ ಮನ್ನಣೆಗೆ ಪಾತ್ರವಾಗಿತ್ತು.

ಅಲ್ಲಿಗೆ ಐನೂರು ಮೈಲು ದೂರದಲ್ಲಿರುವ ವಿಂಧ್ಯಪರ್ವತಗಳಲ್ಲಿ ಚಿತ್ರವರ್ಣವೆಂಬ ನವಿಲು ನೆಲದ ಮೇಲಿನ ಪಕ್ಷಿಗಳಿಗೆಲ್ಲಾ ರಾಜನಾಗಿದ್ದಿತು. ಎಲ್ಲಾ ಭೂಪಕ್ಷಿಗಳೂ ಅದನ್ನು ಗೌರವಿಸುತ್ತಿದ್ದುವು.

ಹೀಗಿರುವಾಗ ಒಂದುದಿನ ದೀರ್ಘಮುಖನೆಂಬ ಕೊಕ್ಕರೆ ಸಂಚಾರ ಮಾಡುತ್ತಾ ವಿಂಧ್ಯಪರ್ವತ ಪ್ರಾಂತಕ್ಕೆ ಬಂದು, ಆಹಾರವನ್ನು ಹುಡುಕುತ್ತಾ ತಿರುಗುತ್ತಿರುವುದನ್ನು ಕೆಲವು ಸಾವಿರ ಪಕ್ಷಿಗಳು ನೋಡಿದುವು. ಅವು ಆ ಕೊಕ್ಕರೆಯನ್ನು ನೋಡಿ, "ಯಾರು ನೀನು? ಯಾವ ದೇಶ ನಿನ್ನದು? ನೀನು ಭೂಚರನೋ ಜಲಚರನೋ? ಯಾರು ನಿನ್ನ ರಾಜ?" ಎಂದು ಕೇಳಿದುವು.

"ನನ್ನದು ಅತ್ಯಂತ ಸುಂದರವೂ ಸುಭಿಕ್ಷವೂ ಆದ ಕರ್ಪೂರದ್ವೀಪ. ನಮ್ಮ ರಾಜ ದೈವಾಂಶ ಸಂಭೂತನಾದ ರಾಜಹಂಸ ಹಿರಣ್ಯಗರ್ಭ. ಭೂಲೋಕ ಸ್ವರ್ಗವೆಂದರೆ ನಮ್ಮ ಊರೇ ಎಂದು ತಿಳಿಯಿರಿ" ಎಂದಿತು ಕೊಕ್ಕರೆ.

ಅದು ಅಷ್ಟಕ್ಕೆ ಬಾಯಿ ಮುಚ್ಚುವುದನ್ನು ಬಿಟ್ಟು, "ನೀವೆಲ್ಲಾ ಈ ಕಾಡು ಪ್ರದೇಶವನ್ನು ಬಿಟ್ಟು ನಮ್ಮ ಕರ್ಪೂರದ್ವೀಪಕ್ಕೆ ಬಂದು ಸುಖವಾಗಿದ್ದುಬಿಡಿ" ಎಂದು ಹೇಳಿತು.

"ನಿನ್ನ ಹೊಟ್ಟೆಯ ಪಾಡು ಹುಡುಕುತ್ತ ಈ ಚಿತ್ರವರ್ಣನ ರಾಜ್ಯಕ್ಕೆ ಬಂದವನಿಗೆ ಇಂತಹ ಗರ್ವದ ಮಾತು ಸರಿಯಲ್ಲ. ಸುಮ್ಮಸುಮ್ಮನೆ ಬಡಾಯಿ ಕೊಚ್ಚಿಕೊಂಡು ಗೌರವಪಡೆಯಲು ನೋಡಬೇಡ." ಎಂದು ನೆಲದ ಪಕ್ಷಿಗಳು ಹೇಳಿದುವು.

ಕೊಕ್ಕರೆಗೆ ಸಿಟ್ಟು ಬಂದು, "ಹುಡುಕಿದರೂ ಹೊಟ್ಟೆಗೇನೂ ಸಿಗದಿರುವ ನಿಮ್ಮದೇ ಗತಿಗೇಡಿನ



"ಹೇಗೆ ?" ಎಂಬ ಪಕ್ಷಿಗಳ ಪ್ರಶ್ನೆಗೆ, "ಯುದ್ಧ ಮಾಡಿ" ಎಂದಿತು ಕೊಕ್ಕರೆ. "ಯುದ್ಧ ಮಾಡಲು ನಮಗೂ ಗೊತ್ತಿದೆ. ನಿನ್ನ ರಾಜ ಎಷ್ಟೇ ಬಲವಂತ ನಾಗಿದ್ದರೂ ನಮಗೇನೂ ಭಯವಿಲ್ಲ. ನಾವು ಯುಕ್ತಿ ಯಿಂದಾದರೂ ಗೆಲ್ಲದೆ ಬಿಡಲಾರೆವು." ಎಂದುವು ನೆಲದ ಪಕ್ಷಿಗಳು.

ತರುವಾಯ ನೆಲದ ಪಕ್ಷಿಗಳು ಕೊಕ್ಕರೆಯನ್ನು ಚಿತ್ರವರ್ಣ ನವಿಲಿನ ಬಳಿಗೆ ಕರೆದುಕೊಂಡು ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿದುವು. ರಾಯಭಾರಿ ಯಾಗಿ ತಿರುಗಾಡುವ ಗಿಳಿ, ಕರ್ಪೂರದ್ವೀಪವು ಜಂಬೂ ದ್ವೀಪದೊಳಗಿನ ಭಾಗವೇ ಎಂದು ಹೇಳಿತು. ಅದನ್ನು ಸಮರ್ಥಿಸುವಂತೆ ಚಿತ್ರವರ್ಣ ನವಿಲು, ಜಂಬೂದ್ವೀಪ ಕ್ಕೆಲ್ಲಾ ತಾನೇ ರಾಜನಾದುದರಿಂದ, ಕರ್ಪೂರದ್ವೀಪಕ್ಕೆ ಕೂಡಾ ತಾನೇ ರಾಜನೆಂದು ಹೇಳಿತು,

ದೀರ್ಘ ಮುಖನು ಇದಕ್ಕೆ ಒಪ್ಪದೆ, ತನ್ನ ರಾಜ ನಾದ ಹಿರಣ್ಯಗರ್ಭ ಹಂಸ ರಾಜನೇ ಜಂಬೂದ್ವೀಪ ಕ್ಕೆಲ್ಲಾ ಚಕ್ರವರ್ತಿ ಎಂದು ವಾದಿಸಿತು. ಕಡೆಗೆ ನೆಲದ ಪಕ್ಷಿಗಳು, "ನಿನ್ನ ರಾಜನು ಈ ಮಾತನ್ನು ಹೇಗೆ ರುಜು ಮಾಡುವನು ?" ಎಂದು ಕೇಳಿದುವು.

"ಯುದ್ಧ ಮಾಡಿ ರುಜು ಪಡಿಸುತ್ತಾನೆ ! ನೀವು ನಿಮ್ಮ ರಾಯಭಾರಿಯನ್ನು ನಮ್ಮ ರಾಜನ ಬಳಿಗೆ ಕಳುಹಿಸಿ, ನಿಮ್ಮ ಆಳ್ವಿಕೆಯನ್ನು ಒಪ್ಪದಿದ್ದರೆ ಯುದ್ಧಕ್ಕೆ ಬರುತ್ತೇವೆಂದು ಹೇಳಿಸಿ ನೋಡಿರಿ. ಆ ಮೇಲೆ ಏನಾಗುವುದೋ ಗೊತ್ತಾಗುತ್ತದೆ" ಎಂದಿತು ದೀರ್ಘಮುಖ ಕೊಕ್ಕರೆ.

ಚಿತ್ರವರ್ಣ ನವಿಲು ಮಂತ್ರಿಯಾದ ದೂರದರ್ಶನ ನೆಂಬ ಹದ್ದಿನ ಮುಖವನ್ನು ನೋಡಿತು. ಅದು ತುಂಬಾ ವಿವೇಕವುಳ್ಳ ಹದ್ದು. ಹಿರಣ್ಯಗರ್ಭ ಹಂಸ ರಾಜನ ಮಂತ್ರಿ ಯಾರೆಂದು ದೂರದರ್ಶನನು ಕೇಳಲು, ಸರ್ವಜ್ಞನೆಂಬ ಚಕ್ರವಾಕವೆಂದು ಕೊಕ್ಕರೆ ಹೇಳಿತು. ಚಕ್ರವಾಕವು ಕರ್ಪೂರದ್ವೀಪಕ್ಕೆ ಸೇರಿದ

ಊರು. ನಿಮ್ಮ ಗರ್ವ ಮಾತ್ರ ಬಲು ಜೋರು. ಆದ್ದರಿಂದಲೇ ನನ್ನ ಮಾತು ಬಡಾಯಿ ಹಾಗೆ ನಿಮಗೆ ಕಾಣುತ್ತದೆ." ಎಂದಿತು ಕೊಕ್ಕರೆ.

"ನಿನ್ನ ಆ ಹಿರಣ್ಯಗರ್ಭ ಹಂಸನನ್ನು ರಾಜನಾಗಿ ಮಾಡಿದವರು ಯಾರು ?" ಎಂದು ನೆಲದ ಪಕ್ಷಿಗಳು ಕೇಳಿದುವು.

"ನಿಮ್ಮ ಚಿತ್ರವರ್ಣನನ್ನು ರಾಜ ಮಾಡಿದ್ದು ಯಾರು ?" ಎಂದು ಕೊಕ್ಕರೆ ತಿರುಗಿ ಕೇಳಿತು.

"ಮಾಡತಕ್ಕವರೇ ಮಾಡಿದರು. ಚಿತ್ರವರ್ಣನು ಇಡಿಯ ಜಂಬೂದ್ವೀಪಕ್ಕೇ ರಾಜನು. ನಿನ್ನ ಕರ್ಪೂರ ದ್ವೀಪವು ಜಂಬೂದ್ವೀಪದೊಳಗಿನದೇ !" ಎಂದುವು ನೆಲದ ಪಕ್ಷಿಗಳು.

"ಬರಿ ಮಾತಿನಿಂದಲೇ ರಾಜ್ಯಗಳನ್ನು ಜಯಿಸ ಬಹುದಾದರೆ ನೀನು ಹೇಳಿದುದು ನಿಜವೇ, ಜಂಬೂ ದ್ವೀಪಕ್ಕೆಲ್ಲಾ ತಾನೇ ರಾಜನೆಂದು ನಮ್ಮ ಹಿರಣ್ಯ ಗರ್ಭನೂ ನಿರೂಪಿಸಬಲ್ಲನು." ಎಂದಿತು ಕೊಕ್ಕರೆ.

ಪಕ್ಷಿಯಾದುದರಿಂದ, ಆ ಪದವಿಗೆ ಅದು ತಕ್ಕುದಾಗಿದೆ ಎಂದು ಹೇಳಿ ಒಪ್ಪಿಕೊಂಡಿತು ಹದ್ದು.

ನವಿಲುರಾಜ ತನ್ನ ಮಂತ್ರಿಯೊಂದಿಗೆ ಸ್ವಲ್ಪ ಆಲೋಚನೆ ಮಾಡಿದ ಮೇಲೆ, ಗಿಳಿಯನ್ನು ರಾಯಭಾರಿಯಾಗಿ ಹಿರಣ್ಯಗರ್ಭನ ಬಳಿಗೆ ಕಳುಹಿಸಲು ನಿಶ್ಚಯ ಮಾಡಿತು. ಗಿಳಿ ರಾಯಭಾರಿಯಾಗಿ ಹೋಗಲು ಒಪ್ಪಿದರೂ, ದುಷ್ಟನಾದ ಈ ದೀರ್ಘಮುಖ ಕೊಕ್ಕರೆಯೊಂದಿಗೆ ಕರ್ಪೂರದ್ವೀಪಕ್ಕೆ ಹೋಗಲು ಒಪ್ಪಲಿಲ್ಲ.

ಅದನ್ನು ತಿಳಿದು ಕೊಕ್ಕರೆ "ನನ್ನನ್ನು ಯಾವ ವಿಧದಲ್ಲಿ ದುಷ್ಟನೆನ್ನುವಿ ?" ಎಂದು ಕೇಳಿತು.

"ನೀನು ನಿನ್ನ ಮಾತುಗಳಿಂದ, ಪ್ರವರ್ತನೆಗಳಿಂದ ಜಗಳವನ್ನು ಕೆದರಿದವನು, ನಮಗೆಲ್ಲಾ ಹಗೆಯ ಬಿಸಿಯನ್ನು ಏರಿಸಿದನು. ನಿನಗೆ ಸಮಯೋಚಿತವಾಗಿ ಶಾಂತ ರೀತಿಯಲ್ಲಿ ಮಾತನಾಡುವ ಜಾಣತನವಿರುತ್ತಿದ್ದರೆ, ಪರಿಸ್ಥಿತಿ ಸೌಮ್ಯವಾಗಿದ್ದು ನಿನಗೆ ಸ್ವಲ್ಪ ಕೀರ್ತಿ ಕೂಡಾ ಬರುತ್ತಿತ್ತು." ಎಂದಿತು ಗಿಳಿ.

"ಹಾಗೇನು ?" ಎಂದು ಹೇಳಿ ದೀರ್ಘಮುಖ ಕೊಕ್ಕರೆ ಕರ್ಪೂರದ್ವೀಪಕ್ಕೆ ಹಿಂದಿರುಗಿ ಹೋಗಿ, ಹಿರಣ್ಯಗರ್ಭ ಹಂಸ ರಾಜನೊಂದಿಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿತು. ಹಿರಣ್ಯಗರ್ಭವು ತಾಮರೆ ಹೂವಿನ ಸಿಂಹಾಸನದ ಮೇಲೆ ಕುಳಿತುಕೊಂಡು ದೀರ್ಘಮುಖನ ಮಾತುಗಳನ್ನು ಕೇಳುತ್ತಿದ್ದಾಗ, ಅದರ ಸುತ್ತಲೂ ಅದರ ಮಂತ್ರಿಗಳೂ, ಸರ್ವಜ್ಞ ಚಕ್ರವಾಕವನ್ನು ಮುಂದಿಟ್ಟುಕೊಂಡು ಕುಳಿತಿದ್ದುವು.

ಎಲ್ಲವನ್ನೂ ಕೇಳಿ ಹಿರಣ್ಯಗರ್ಭನು ದೀರ್ಘಮುಖನೊಂದಿಗೆ, "ಹೀಗೆ ನೀನು ಯುದ್ಧ ಮಾಡುತ್ತೇವೆಂದು ಹೆದರಿಸಿ ಬಂದುದು ದುಡುಕುತನವೇ ಆಯಿತು, ನಿನ್ನ ದೇಶದ ಬಲವೆಷ್ಟೆಂಬುದನ್ನು ನೀನು ಗಮನಿಸಲಿಲ್ಲ" ಎಂದಿತು.



ಮಂತ್ರಿ ಚಕ್ರವಾಕವು ಹಂಸರಾಜನೊಂದಿಗೆ ಏಕಾಂತದಲ್ಲಿ, "ದೀರ್ಘಮುಖನು ತುಂಬಾ ಮೂರ್ಖತನವಾಗಿ ಪ್ರವರ್ತಿಸಿದ್ದಾನೆ. ಅವನನ್ನು ಹಾಗೆ ಜಗಳ ಕೆದರುವಂತೆ ಪ್ರೇರೇಪಿಸಿದವರು ನಮ್ಮ ಸೈನ್ಯಾಧಿಕಾರದಲ್ಲಿರುವ ಯಾರೋ ಇರಬೇಕು." ಎಂದು ಸೂಚಿಸಿತು.

"ನಡೆದುಹೋದ ಸಮಾಚಾರ ಹೇಳಿ ಪ್ರಯೋಜನವಿಲ್ಲ. ಪ್ರಸ್ತುತ ಕರ್ತವ್ಯ ಏನೆಂಬುದನ್ನು ಹೇಳು." ಎಂದಿತು ಹಂಸರಾಜ.

"ನಾವು ಜಂಬೂದ್ವೀಪಕ್ಕೆ ಇಬ್ಬರು ಚಾರರನ್ನು ಕಳುಹಿಸೋಣ. ಒಬ್ಬನು ಹೋಗಿ ಅಲ್ಲಿಯ ಪರಿಸ್ಥಿತಿಗಳನ್ನು ಗಮನಿಸಿ ಬರಲಿ. ಎರಡನೆಯವನು ನಮ್ಮ ದೂತನಾಗಿ ಹೋಗಿ, ನಮ್ಮ ಸಂದೇಶವನ್ನು ಅವರಿಗೆ ಹೇಳಲಿ" ಎಂದಿತು ಸರ್ವಜ್ಞ ಚಕ್ರವಾಕ.

ಆ ರೀತಿಯಲ್ಲಿ, ಇಬ್ಬರು ದೂತರಾಗಿ ದೀರ್ಘಮುಖನನ್ನೂ, ಇನ್ನೊಂದು ಕೊಕ್ಕರೆಯನ್ನೂ, ಹೇಳುವುದನ್ನು ಹೇಳಿ ಕಳುಹಿಸಿಕೊಟ್ಟರು.

ಅಷ್ಟರಲ್ಲಿ ಜಂಬೂದ್ವೀಪದಿಂದ ಗಿಳಿರಾಯಭಾರಿ ಬಂದಿರುವನೆಂಬ ಸಮಾಚಾರ ಬಂದಿತು. ಆ ರಾಯಭಾರಿಗೆ ಒಂದು ಬಿಡದಿಯನ್ನು ತೋರಿಸಿ, ಅಲ್ಲಿ ವಿಶ್ರಾಂತಿಪಡೆಯಬೇಕೆಂದೂ, ರಾಜನ ಅಜ್ಞೆಯಾದಾಗ ಸಭೆಗೆ ಕರೆಯಿಸಲಾಗುವುದೆಂದೂ ಅಪ್ಪಣೆ ಹೊರಡಿಸಲಾಯಿತು.

ಈ ಪರಿಸ್ಥಿತಿಯನ್ನು ನೋಡಿ ಹಿರಣ್ಯಗರ್ಭ ರಾಜಹಂಸವು ತಲೆದೂಗುತ್ತ ಉತ್ಸಾಹದಿಂದ, "ಹಾಗಾದರೆ ಯುದ್ಧವು ಬಂತೆಂದೇ ಆಯಿತು!" ಎಂದಿತು ಸರ್ವಜ್ಞ ಮಂತ್ರಿಯೊಂದಿಗೆ.

ಆಗ ಸರ್ವಜ್ಞ ಮಂತ್ರಿ ಹೀಗೆಂದು ಹೇಳಿತು: "ಪ್ರಭೂ! ಯುದ್ಧವೇ ಬೇಕಾದುದೆಂಬ ಹಾಗೆ ಉತ್ಸಾಹಪಡಬಾರದು. ಶತ್ರುವಿನ ಮುಂದೆ ದಾಸೋಹಂ ಅಂದು ದೇಶವನ್ನು ಅವರಿಗೆ ಬಿಟ್ಟುಕೊಡುವುದು ಎಷ್ಟು ತಪ್ಪೋ, ಅವಸರಪಟ್ಟು ಯುದ್ಧಕ್ಕೆ ಇಳಿಯುವುದು ಕೂಡಾ ಅಷ್ಟೇ ತಪ್ಪು, ಒಳ್ಳೆಯ ಮಾತುಗಳು, ಬಹುಮಾನಗಳು, ಬೆದರಿಕೆಗಳು, ರಾಜಕೀಯ ಸಂಬಂಧಗಳ ವರ್ಜ್ಯ ಮುಂತಾದುವೆಲ್ಲ ನಿಷ್ಫಲವಾದ ಮೇಲೆಯೇ ಯುದ್ಧರಂಗಕ್ಕೆ ಇಳಿಯಬೇಕು. ಸಾವು ಬದುಕುಗಳ ಹೋರಾಟದ ಅನುಭವವಿಲ್ಲದವನು ತಾನೊಬ್ಬ ಮಹಾ ವೀರನೆಂದೇ ಅಂದುಕೊಂಡಿರುತ್ತಾನೆ. ಯುದ್ಧ ಬರುವುದೆಂದರೆ ಜನರು ಉತ್ಸಾಹದಿಂದ ಗಂಟೆ ಹೊಡೆಯುತ್ತಾರೆ. ಆ ಯುದ್ಧದಲ್ಲಿ ತಮ್ಮವರು ಸತ್ತರೆ ಹಣೆ ಬಡೆದುಕೊಂಡು ಅಳುತ್ತಾರೆ. ಪ್ರತಿಯುದ್ಧವೂ ಎಂದೋ ಒಂದು ದಿನ ಶಾಂತಿಯೊಂದಿಗೆ ಅಂತ್ಯವಾಗಲೇ ಬೇಕು. ಆದುದರಿಂದ ಶಾಂತಿಯೇ ಸಹಜ ಪರಿಸ್ಥಿತಿ ಎಂಬುದನ್ನು ಮರೆಯಬಾರದು. ಯುದ್ಧಕ್ಕಿಂತ ಶಾಂತಿಯೇ ವಾಂಛನೀಯವಾದುದೆಂದು ತಿಳಿಯಬೇಕು. ಆದರೆ ಈಗ ಯುದ್ಧವು ಬಂದೇ ಬಂದುದರಿಂದ ಅದಕ್ಕೆ ಬೇಕಾದ ಪ್ರಯತ್ನಗಳನ್ನು ಮಾಡಲೇ ಬೇಕಾಗಿದೆ. ಚಿತ್ರವರ್ಣ ನವಿಲುರಾಜನು ಬಲಿಷ್ಠನೆಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು. ನೀರಿನ ಹಕ್ಕಿಗಳಿಗಿಂತ ನೆಲದ ಪಕ್ಷಿಗಳು ಸಂಖ್ಯೆಯಲ್ಲಿಯೂ ಬಲದಲ್ಲಿಯೂ ಹೆಚ್ಚಿನವಾಗಿದೆ. ನಮ್ಮ ಪರಿಸ್ಥಿತಿ ಹೇಗಿದೆಯೆಂದರೆ, ತಿಮಿಂಗಿಲವು ನೆಲದ ಮೇಲಿನ ಆನೆಯೊಂದಿಗೆ ಹೋರಾಡುವ ಹಾಗಿದೆ. ಬಲವಂತನು ಇದಿರಿಸಿದಾಗ ಬುದ್ಧಿವಂತನು ಆಮೆಯ ಹಾಗೆ ಹಿಂದೆ ಜಗ್ಗುತ್ತಾನೆ. ಆದರೆ ಅವಕಾಶ ಸಿಕ್ಕಿದಾಗ ಹಗೆ ಹಿಡಿದ ಹಾವಿನ ಹಾಗೆ ಹೆಡೆಯೆತ್ತಿ ಹೊಡೆಯುತ್ತಾರೆ. ಈಗ ಗಿಳಿರಾಯಭಾರಿ ವಿಶ್ರಾಂತಿ ತೆಗೆದುಕೊಳ್ಳುತ್ತಿರಲಿ. ಇಷ್ಟರೊಳಗೆ ನಾವು ನಮ್ಮ ಕೋಟೆಯನ್ನು ಬಲಪಡಿಸೋಣ. ಗುಟ್ಟಿನಲ್ಲಿ ಕೆಲಸಗಳು ಬೇಗಬೇಗನೇ ನಡೆಯುವಂತೆ ಮಾಡಿಸಿರಿ".






೫

[ಏಕಾಕ್ಷಿ ಮಾಂತ್ರಿಕನ ಕಣ್ಣಿಗೆ ಬೀಳದಂತೆ ಸಮರಸೇನನು ತನ್ನ ಸೈನಿಕರೊಂದಿಗೆ ಅರಣ್ಯದಲ್ಲಿ ಸ್ವಲ್ಪದೂರ ಹೋದನು. ಅಲ್ಲಿ ದಾಹಶಾಂತಿಗಾಗಿ ಒಂದು ಮಡುವಿಗಿಳಿದ ಇಬ್ಬರು ಸೈನಿಕರು ಮೊಸಳೆಗಳ ಹೊಟ್ಟೆ ಸೇರಿದರು. ಆ ಮೇಲೆ ಉಳಿದವರು ಮತ್ತಿಷ್ಟು ಮುಂದೆ ಹೋದಾಗ ಒಂದು ಸರಸ್ಸಿನಲ್ಲಿ ಸ್ನಾನಮಾಡುವ ಭಯಂಕರ ಮಂತ್ರವಾದಿ ಚತುರ್ನೇತ್ರನನ್ನು ನೋಡಿದರು.]

ತಾವು ಆ ಮಂತ್ರವಾದಿಯ ಕಣ್ಣಿಗೆ ಬೀಳದಂತೆ ಸರೋವರದ ತೀರದಲ್ಲಿದ್ದ ಪೊದೆಗಳ ಮರೆಯಲ್ಲಿ ಅಡಗಿಕೊಂಡಿದ್ದ ಸಮರಸೇನನಿಗೂ, ಸೈನಿಕರಿಗೂ ಈಗ ಸರೋವರದಲ್ಲಿ ಒಬ್ಬ ಮನುಷ್ಯನು ನಿಂತಿರುವುದು ಸ್ಪಷ್ಟವಾಗಿ ಕಾಣಿಸಿತು. ಕೊಂಬೆಯಿಂದ ಜಾರಿದ ಆ ಕುಚ್ಚುಟೋಪಿ ಅವನ ತಲೆಯ ಮೇಲಿದ್ದಿತು. ಆ ಟೋಪಿಯ ಮುಂಭಾಗದಲ್ಲಿರುವ ಎರಡು ನೇತ್ರಾಕೃತಿಗಳು ಮಿರಿಮಿರಿ ಕಾಂತಿಯನ್ನು ಹೊರಚೆಲ್ಲುತ್ತಿದ್ದುವು. ಅವುಗಳಿಗೂ ಜೀವವಿದೆಯೇನೋ! ಆ ಎರಡು ಕಣ್ಣುಗಳೂ ಅವನ ಸಹಜವಾದೆರಡು ಕಣ್ಣುಗಳೂ ಅವನ ಚತುರ್ನೇತ್ರನೆಂಬ ಹೆಸರಿಗೆ ಸರಿಹೋಗುತ್ತಿತ್ತು. ಇನ್ನು ಸಮರಸೇನನಿಗೆ ಯಾವ ಸಂಶಯವೂ ಇರ ಲಿಲ್ಲ. ಈ ಅದ್ಭುತ ಮನುಷ್ಯನೇ ಏಕಾಕ್ಷಿ ಮಾಂತ್ರಿಕನ ಬದ್ಧಶತ್ರುವಾದ ಚತುರ್ನೇತ್ರನು! ಅವನಿಗಿಂತ ಇವನು ಸ್ವಲ್ಪವೂ ಕಡಿಮೆಯವನಲ್ಲ! ಇವನನ್ನು ನುಂಗಲು ಬಂದ ಆ ಬ್ರಹ್ಮಾಂಡದ ಶರೀರದ, ಚಿಕ್ಕ ತಲೆಯ ಪ್ರಾಣಿಯನ್ನು ನೋಡಿ ಇವನು ಸ್ವಲ್ಪವೂ ಹೆದರದೆ, "ಏನೋ ಹಂಡೇಹೊಟ್ಟೆಯವನೇ! ಈ ಚತುರ್ನೇತ್ರನನ್ನು ನುಂಗುವಷ್ಟು ಧೈರ್ಯವೇ ನಿನಗೆ? ನನ್ನನ್ನು ನುಂಗಿ ಜೀರ್ಣಿಸಿಕೊಳ್ಳಬಲ್ಲೆಯಾ ಬುದ್ಧಿ



ಯಿಲ್ಲದ ತಲೆಯುವನೇ !" ಎಂದು ಅವಹೇಳನೆಮಾಡಿ ಹೂಂಕರಿಸಿದನು. ಅದು ಸದ್ದಿಲ್ಲದೆ ಎತ್ತಲೋ ಹೊರಟುಹೋಯಿತು. ಈ ಬಗೆಯ ಮಾತಿನಿಂದ ಇವನು ಮಹಾಶಕ್ತಿವಂತನಾಗಿರಬೇಕೆಂದು ಸಮರಸೇನನು ಅಂದುಕೊಂಡನು.

ಇಂತಹ ಭಯಂಕರ ಮಾಂತ್ರಿಕನ ಕಣ್ಣುಗಳಿಗೆ ಬೀಳದೆ ಈ ಸರೋವರದ ತೀರದಿಂದ ತಪ್ಪಿಸಿಕೊಂಡು ಹೋಗುವುದು ಹೇಗೆ ? ಸಮರಸೇನನು ಈ ಆಲೋಚನೆಯಲ್ಲಿ ಮುಳುಗಿರಲು, ಒಬ್ಬ ಸೈನಿಕನು ಪಿಸುದನಿಯಿಂದ, "ಸೇನಾನೀ ದೊರೆಗಳೇ ! ಇವನಿಗೆ ಎಲ್ಲರ ಹಾಗೆ ಎರಡು ಕಣ್ಣುಗಳು ಮಾತ್ರವಲ್ಲದೆ ನಾಲ್ಕು ಕಣ್ಣುಗಳಿವೆ ನೋಡಿದಿರಾ ?" ಎಂದನು ಆಗ ತಾನೇ ಕಂಡುಹಿಡಿದವನಂತೆ.

ಸಮರಸೇನನು ಅವನಿಗೇನೂ ಉತ್ತರ ಕೊಡಲಿಲ್ಲ. ಇನ್ನೊಬ್ಬ ಸೈನಿಕನು ಮೊದಲನೆಯವನನ್ನು ಕೋಪದಿಂದ ನೋಡಿ, "ಇದೆಂಥ ಪ್ರಶ್ನೆ ! ಅವನಿಗೆ ನಾಲ್ಕು ಕಣ್ಣುಗಳಿರುವುದು ಸ್ಪಷ್ಟವಾಗಿರುವಾಗ, ಅವನ ಹೆಸರೇ ಚತುರ್ನೇತ್ರ ಎಂದಿರುವಾಗ, ನಿನ್ನ ಪ್ರಶ್ನೆಗೆ ಅರ್ಥವೇ ಇಲ್ಲ !" ಎಂದನು.

ಸಮರಸೇನನು ಸೈನಿಕರ ಮಾತುಗಳನ್ನು ಒಂದು ಕಿವಿಯಿಂದ ಕೇಳುತ್ತ, ಮುಂದಿನ ಕರ್ತವ್ಯವನ್ನು ಕುರಿತು ಆಲೋಚನೆ ಮಾಡುತ್ತಿದ್ದನು. ಸ್ವಲ್ಪ ಹೊತ್ತಿನ ತರುವಾಯ ಅವನು ಸೈನಿಕರ ಕಡೆಗೆ ತಿರುಗಿ, "ಈಗ ನಮಗೆ ಬಂದಿರುವ ಈ ವಿಷಮ ಪರಿಸ್ಥಿತಿಯನ್ನು ಕುರಿತು ಎಷ್ಟರಮಟ್ಟಿಗೆ ಅರ್ಥ ಮಾಡಿಕೊಂಡಿದ್ದೀರೆಂದು ತಿಳಿಯಲು ಕೇಳುತ್ತೇನೆ. ನಾವು ಈ ಮೊದಲು ನೋಡಿದ ಏಕಾಕ್ಷಿ ಮಾಂತ್ರಿಕನ ಬಾಯಿಯಿಂದ ಹೊರಟ ಮಾತುಗಳಿಂದ ಚತುರ್ನೇತ್ರನೆಂಬವನು ಅವನ ಬದ್ಧವೈರಿ ಎಂದು ಗೊತ್ತಾಗಿದೆ ಹೌದಾ ?" ಎಂದನು.

ಒಬ್ಬನ ಹೊರತು ಉಳಿದವರು ಹೌದೆಂದು ತಲೆಯಾಡಿಸಿದರು. ಅನುಮಾನ ತೀರದ ಆ ಸೈನಿಕನು, "ಸೇನಾನೀ ದೊರೆಗಳೇ ! ನೀವು ತಪ್ಪಾಗಿ ತಿಳಿಯಬಾರದು. ನಾನು ಒಂದು ಸಣ್ಣ ಸಂಶಯವನ್ನು ಹೇಳಲೇ ?" ಎಂದನು.

"ಏನು ನಿನ್ನ ಸಂಶಯ ? ನಿನಗೆ ಮಾತ್ರವಲ್ಲ, ಉಳಿದವರಿಗೂ ಏನಾದರೂ ಸಂಶಯವಿದ್ದರೆ ಕೇಳಬಹುದು. ಇಂತಹ ಆಪತ್ತಿನ ಸಮಯದಲ್ಲಿ ಒಬ್ಬನ ಮಾತಿನ ಮೇಲೆ ಹೋಗುವುದಕ್ಕಿಂತಲೂ ಎಲ್ಲರೂ ಕೂಡಿ ಆಲೋಚಿಸಿ ಒಂದು ನಿಶ್ಚಯಕ್ಕೆ ಬರುವುದೇ ಒಳ್ಳೆಯದು. ಮನಸ್ಸಿನಲ್ಲಿದ್ದುದನ್ನು ಹೇಳಲು ಶಂಕಿಸಬೇಕಾಗಿಲ್ಲ" ಎಂದನು ಸಮರಸೇನ.

"ದೊರೆಗಳೇ, ನೀವು ಆ ಏಕಾಕ್ಷಿ ಮಾಂತ್ರಿಕನಿಗೂ ಈ ಚತುರ್ನೇತ್ರನೆಂಬವನಿಗೂ ಇರುವ ದ್ವೇಷವನ್ನು ನಮಗೆ ಅನುಕೂಲವಾಗುವ ಹಾಗೆ ಉಪಯೋಗಿಸಿಕೊಳ್ಳಲು ಆಲೋಚಿಸುವ ಹಾಗೆ ನಮಗೆ ತೋರುತ್ತದೆ. ಹಾಗಿದ್ದರೆ ನನ್ನದೊಂದು ಚಿಕ್ಕ ಸಲಹೆ.

ಸಿಂಹಕ್ಕೂ ಹೆಬ್ಬುಲಿಗೂ ಯಾವಾಗಲೂ ಶತ್ರುತ್ವವೇ. ಆದರೆ ಅವೆರಡೂ ಕ್ರೂರವಾದ ಮೃಗಗಳೆಂಬುದನ್ನು ಮರೆತುಬಿಡಬಾರದು. ನಮಗೆ ಅವೆರಡೂ ಒಂದೇ. ಅಂದರೆ ಎರಡನ್ನೂ ನಂಬುವ ಹಾಗಿಲ್ಲವಷ್ಟೆ?" ಎಂದನು ಸಂದೇಹದ ಸೈನಿಕ.

ಸೈನಿಕನ ಮಾತು ಕೇಳಿ ಸಮರಸೇನನು ಸ್ವಲ್ಪ ಆಲೋಚನೆಗೆ ಬಿದ್ದನು. ಬಳಿಕ ತಲೆಯಾಡಿಸುತ್ತ ಆ ಸೈನಿಕನನ್ನು ನೋಡಿ, "ನಿನ್ನ ಮಾತು ನಿಜವೇ. ಇವರಿಬ್ಬರೂ ಮಹಾಮಂತ್ರವೇತ್ತರು. ದುಷ್ಟಶಕ್ತಿಗಳನ್ನೆಲ್ಲಾ ತಮ್ಮ ಅಂಕೆಯೊಳಗೆ ಇಟ್ಟುಕೊಂಡವರು..." ಎಂದು ಹೇಳುತ್ತಿರಲು, ಸರೋವರದಲ್ಲಿದ್ದ ಚತುರ್ನೇತ್ರನು ತೀರಕ್ಕೆ ಬಂದುದನ್ನು ನೋಡಿ ಮಾತು ನಿಲ್ಲಿಸಿದನು.

ಈಗ ಆ ಮಾಂತ್ರಿಕನ ಪೂರ್ತಿರೂಪ ಕಾಣುತ್ತಿತ್ತು. ಸಾಧಾರಣ ಮನುಷ್ಯರಿಗಿಂತ ಒಂದೂವರೆ ಪಟ್ಟು ಹೆಚ್ಚು ಎತ್ತರವಿದ್ದನು. ರಾಕ್ಷಸನಂಥ ಅವನ ಆಕೃತಿಯನ್ನು ನೋಡಿ ಸಮರಸೇನನೇ ಜುಮುಗುಟ್ಟಿದನೆಂದರೆ ಸೈನಿಕರೆಷ್ಟು ಕಂಪಿಸುತ್ತಿರುವರೋ! ಅವರು ಓಡಿಹೋಗಲು ಕದಲಬೇಕೆಂದಿರುವಾಗ, ಚತುರ್ನೇತ್ರನ ಕಂಚಿನಂತಹ ತೀಕ್ಷ್ಣವಾದ ಕಂಠಸ್ವರವು ಅವರನ್ನೆಲ್ಲ ನಿಂತಲ್ಲೇ ಮರಗಟ್ಟಿಸಿತು. "ಎಲವೋ ಹುಚ್ಚು ಮಂಕುಗಳೇ! ನನಗೇ ಕಣ್ಣು ಗಟ್ಟಿಸುವಿರಾ? ಎಷ್ಟು ಮಾತ್ರಕ್ಕೂ ಅದು ನಿಮ್ಮಿಂದ ಸಾಧ್ಯವಿಲ್ಲ. ಈ ಕಾಡಿನಲ್ಲಿರುವ ಮರಗಿಡಗಳೂ, ಗುಡ್ಡಬೆಟ್ಟಗಳೂ, ಹಳ್ಳತಿಟ್ಟುಗಳೂ ಯಾವುದೂ ನನ್ನ ದೃಷ್ಟಿಗೆ ಅಡ್ಡ ಬರುವಂಥವಲ್ಲ! ಯಾವುದನ್ನಾದರೂ ಭೇದಿಸಿ ಹೋಗುವಂಥಾದ್ದು ನನ್ನ ದೃಷ್ಟಿ ಗೊತ್ತೋ? ಈ ದ್ವೀಪದಲ್ಲಿ ಯಾವ ಮೂಲೆಯಲ್ಲಿ ಏನು ನಡೆದರೂ, ನಡೆಯುತ್ತಿದ್ದರೂ ನನಗೆ ಗೊತ್ತಾಗುತ್ತದೆ. ಲೋ ಉಲೂಕಾ! ನರವಾನರಾ!" ಎಂದು ಅರಣ್ಯವೇ ಮಾರ್ಮೊಳಗುವ ಹಾಗೆ ಕೂಗಿದನು.






ಆ ಕೂಗು ಕೇಳಿ ಕರಿಗೂಗೆಯೂ ನರವಾನರವೂ ಮರಗಳ ಹಿಂದಿನಿಂದ ವೇಗವಾಗಿ ಬಂದುವು. ನರ ವಾನರವು ಸಮರಸೇನನ ದಾರಿಗೆ ಅಡ್ಡವಾಗಿ ನಿಂತಿತು, ನರವಾನರವು ಕೈಯಲ್ಲೊಂದು ಮರದ ಕೊಂಬೆ ಯನ್ನು ಹಿಡಿದು ಬೀಸುತ್ತ ಕಣ್ಣು ತಿರುಗಿಸುತ್ತಿದ್ದಿತು. ಕರಿಗೂಗೆ ಆಕಾಶದಲ್ಲಿ ಚಕ್ರಾಕಾರವಾಗಿ ಹಾರುತ್ತ ಕರ್ಣಕಠೋರವಾಗಿ ಗೂಂಗರಿಸುತ್ತಿದ್ದಿತು.

ಸಮರಸೇನನಿಗೆ ತಾವು ಎಂತಹ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡೆವೆಂಬ ಸಂಗತಿ ಸ್ಪಷ್ಟವಾಯಿತು. ಇಲ್ಲಿ ತಮ್ಮಲ್ಲಿರುವ ಕತ್ತಿ ಬಿಲ್ಲು ಬಾಣಗಳೆಲ್ಲಾ ಹುಲ್ಲು ಕಡ್ಡಿ ಗಳಿಗೆ ಸಮಾನ! ಈ ಸಂದರ್ಭದಲ್ಲಿ ಸೈನಿಕರ ಭೀತಿ ಯನ್ನು ಹೋಗಲಾಡಿಸಬೇಕಾದುದು ಮುಖ್ಯವೆಂದು ಕೊಂಡು ಅವನು, "ಹೆದರಬೇಡಿರಿ! ದೇವಿಯ ಅನು ಗ್ರಹವಿರುವಾಗ ನಮಗೇನೂ ಅಪಾಯವಾಗದು. ಎಲ್ಲದಕ್ಕೂ ನಮ್ಮ ಮಹಾತಾಯಿ ಕುಂಡಲಿನೀ ದೇವಿಯೇ ಶರಣ್ಯ!" ಎಂದನು.

ಸೈನಿಕರು ಬೆರಗುವಡೆದು ಕಣ್ಣುಮುಚ್ಚಿ ದೇವಿ ಯನ್ನು ಧ್ಯಾನಿಸತೊಡಗಿದರು. ಚತುರ್ನೇತ್ರನು ಮೆಲ್ಲಮೆಲ್ಲನೆ ಒಂದೊಂದಡಿ ಮುಂದಿಡುತ್ತ, ಮೃದು ವಾದ ಕಂಠದಿಂದ, "ಯಾರು ನೀವು ಪಾಪ? ಈ ದ್ವೀಪಕ್ಕೆ ಏಕೆ ಬಂದಿರಿ? ಈ ಮಿಡುಕಾಟಕ್ಕೆಲ್ಲ ಏತ ಕ್ಕಾಗಿ ಸಿಕ್ಕಿಕೊಂಡಿರಿ?" ಎಂದು ಕೇಳಿದನು.

ಈಗ ಚತುರ್ನೇತ್ರನ ಮುಖದಲ್ಲಿ ಕೋಪವೋ ಕಾಠಿಣ್ಯವೋ ಸ್ವಲ್ಪವೂ ಇರಲಿಲ್ಲ. ಯಥಾರ್ಥವಾದ ಕನಿಕರಭಾವವೇ ಕಾಣುತ್ತಿತ್ತು. ಆ ಭಯಂಕರಾಕಾರ ದವನ ಮುಖದಿಂದ ಹೊರಟ ಸೌಮ್ಯವಾದ ಮಾತನ್ನು ಕೇಳಿ ಸಮರಸೇನನಿಗೂ, ಸೈನಿಕರಿಗೂ ಹೊರಡುತ್ತಿದ್ದ ಜೀವ ಹಿಂದಿರುಗಿದಂತಾಯಿತು. ಆದರೆ ಚತುರ್ನೇತ್ರನ ಪ್ರಶ್ನೆಗೆ ಯಾವ ಬಗೆಯ ಪ್ರತ್ಯುತ್ತರ ಕೊಟ್ಟರೆ ತಮಗೆ ಕ್ಷೇಮವೋ? ಈ ಪ್ರಶ್ನೆಗೆ ಹೆಚ್ಚು ತಡ ಮಾಡುವಂತೆಯೂ ಇಲ್ಲ. ಸತ್ಯ ಹೇಳುವುದೇ ಒಳ್ಳೆಯದೆಂದು ನಿಶ್ಚಯಿಸಿದನು. ಎಲ್ಲ ವನ್ನೂ ತಿಳಿಯಬಲ್ಲವನಂತೆ ತೋರುವ ಇವನ ಹತ್ತಿರ ಸುಳ್ಳುಸೊಟ್ಟು ಹೇಳಿದರೆ ಇನ್ನಷ್ಟು ಇರು ಕಾಟವಾದೀತು.

"ನಮ್ಮದು ಕುಂಡಲಿನೀ ದ್ವೀಪ. ಸಮುದ್ರ ಪ್ರಯಾಣ ಮಾಡುತ್ತ, ತುಫಾನಿಗೆ ಸಿಕ್ಕಿ ದಿಕ್ಕುತಪ್ಪಿ ಅಲೆದು ಇಲ್ಲಿಗೆ ಬಂದು ಸೇರಿದ್ದೇವೆ" ಎಂದನು ಸಮರಸೇನ.

ಚತುರ್ನೇತ್ರನು ನಗುವನ್ನು ಸೂಸಿ, "ಹೌದು. ನಿನ್ನ ಮಾತಿನಲ್ಲಿ ನಿಜವೇನೋ ಇದೆ. ಆದರೆ ಸಮುದ್ರಪ್ರಯಾಣ ಮಾಡುವ ಅಗತ್ಯವೇನು ಬಂತೆಂಬ ಸಮಾಚಾರ ಹೇಳಲಿಲ್ಲ. ನಿಜತಾನೇ? ಅದನ್ನು ಮುಚ್ಚಿಡಬೇಕೆಂದಿರುವಿಯಾ?" ಎಂದನು.

ಇನ್ನು ಕೂಲಂಕಷವಾಗಿ ಎಲ್ಲವನ್ನೂ ಹೇಳದಿದ್ದರೆ ಲಾಭವಿಲ್ಲವೆಂದುಕೊಂಡು ಸಮರಸೇನನು ಎಲ್ಲವನ್ನೂ ಹೇಳಿದನು. ತಮ್ಮ ರಾಜನ ಧನಾಗಾರವು ಖಾಲಿ

ಯಾದುದು, ಅದನ್ನು ಮತ್ತೆ ತುಂಬಿಸುವುದಕ್ಕಾಗಿಯೇ ಸೈನಿಕರನ್ನು ಕರೆದುಕೊಂಡು ಸಮುದ್ರ ಪ್ರಯಾಣ ಹೊರಟುದು, ಧೂಮಕೇತುವಿನ ಶಕುನವನ್ನೂ ಲಕ್ಷಿಸದೆ ಅಪಘಾತಕ್ಕೆ ಸಿಕ್ಕಿ ನಷ್ಟವಾದುದು ಹೀಗೆ ಎಲ್ಲವನ್ನೂ ಹೇಳಿದನು.

ಚತುರ್ನೇತ್ರನು ನಗುತ್ತಾ ತಲೆಯಾಡಿಸುತ್ತಾ ಎಲ್ಲವನ್ನೂ ಕೇಳಿ, "ದೊಡ್ಡ ಕಷ್ಟವೇ ಬಂತು ನಿಮಗೆ. ಧನ ಸಂಗ್ರಹಕ್ಕಾಗಿ ಹೊರಟು, ತುಫಾನಿನ ಹೊಡೆತಕ್ಕೆಸಿಕ್ಕಿ ಈ ಮಾಂತ್ರಿಕ ದ್ವೀಪಕ್ಕೆ ತಳ್ಳಲ್ಪಟ್ಟವರೆಂದಾಯಿತು. ಬೇಕಂತ ಬಂದವರಲ್ಲ. ಚೆನ್ನಾಗಿಯೇ ಇದೆ. ಆದರೆ ನೋಡಪ್ಪಾ. ಇಲ್ಲಿಯೂ ಧನಾಶೆ ಹಿಡಿದ ಒಬ್ಬ ಮಾಂತ್ರಿಕನಿದ್ದಾನೆ. ಅವನ ಧನದ ಆಶೆಗೆ ಇತಿಮಿತಿ ಎಂಬುದಿಲ್ಲ. ಹೀಗೆ ಧನದ ಆಶೆಯವರಾದ ನೀವಿಬ್ಬರೂ ಒಂದಾಗಿ ಬಿಟ್ಟರೆ ಭಲೇ ಸೊಗಸಾಗಿರುತ್ತದೆ!" ಎಂದು ಇನ್ನಿಷ್ಟು ನಕ್ಕನು.

ಅವನಿಗೆ ಏನು ಉತ್ತರ ಕೊಡಲಿಕ್ಕೂ ಸಮರಸೇನನಿಗೆ ತೋರಲಿಲ್ಲ. "ಅಂದರೆ ನಿಮ್ಮ ಮಾತಿನ ಅರ್ಥ..." ಎಂದು ಅವನು ಏನೋ ಹೇಳಲು ಯತ್ನಿಸುವಾಗ, ಆ ಪ್ರಾಂತವೆಲ್ಲಾ ಪ್ರತಿಧ್ವನಿಸುವಂತೆ ದೊಡ್ಡದೊಂದು ಕಂಠಸ್ವರವು ಹೊರಟಿತು. ಅದು ಈ ಮೊದಲು ಕೇಳಿದ್ದ ಕಂಠಸ್ವರವೇ! ಏಕಾಕ್ಷಿ ಮಾಂತ್ರಿಕನದು. "ಹೇಯ್! ಕಂಕಾಳಾ! ಕಾಲಭುಜಂಗಾ! ಬನ್ನಿರಿ ಹೀಗೆ! ಹುಡುಕಿರಿ ಇಲ್ಲೀ!" ಎನ್ನುತ್ತಿದ್ದನು.

ಆ ಶಬ್ದ ಕೇಳಿ ಹೆದರುವ ಸೈನಿಕರಿಗೆ ಸಮರಸೇನನು ಧೈರ್ಯ ಹೇಳುತ್ತ, "ಹೆದರಿ ಕಿರುಚಿ ಲಾಭವಿಲ್ಲ. ಆ ಪೊದರಿನ ಹಿಂದೆ ಅಡಗಿಕೊಳ್ಳೋಣ, ಬನ್ನಿರಿ" ಎಂದು ಬೇಗಬೇಗನೆ ಹೋಗಿ ಅಡಗಿದನು.

ಸೈನಿಕರು ಎತ್ತರವಾದ ಆ ಪೊದರುಗಳ ಕಡೆಗೇ ಓಡಿದರು. ಅಷ್ಟರಲ್ಲಿ ಏಕಾಕ್ಷಿ ಮಾಂತ್ರಿಕನು ಅಲ್ಲಿಗೇ ಬಂದನು. ಕಾಲ ಸರ್ಪವೂ ಮಾನವ ಕಪಾಲವೂ ಅವನೊಂದಿಗೇ ಚಲಿಸಿಕೊಂಡು ಬರುತ್ತಿದ್ದುವು.




ಚತುರ್ನೇತ್ರನನ್ನು ನೋಡಿದ ಕೂಡಲೇ ಅವನು ರುದ್ರಭೀಕರವಾಗಿ ಒಂದು ಗರ್ಜನೆ ಹಾಕಿ, "ಓಹ್! ಬಹಳ ದಿನಗಳ ಮೇಲೆ ಕಣ್ಣಿಗೆ ಬಿದ್ದೆಯೋ ಭಂಡು ಮಾಂತ್ರಿಕಾ! ಸಾಯಲು ಸಿದ್ಧನಾಗು!" ಎನ್ನುತ್ತಾ ಒರೆಯಿಂದ ಸರ್ರನೆ ಇಷ್ಟುದ್ದದ ಕತ್ತಿಯನ್ನು ಎಳೆದುಕೊಂಡನು.

ಚತುರ್ನೇತ್ರನು ಒಂದಿಷ್ಟೂ ಚಲಿಸದೆ ಏಕಾಕ್ಷಿ ಮಾಂತ್ರಿಕನನ್ನು ಚುರು ಚುರು ನೋಡುತ್ತಾ, "ಓಹೋ! ಏಕಾಕ್ಷೀ ಮಹಾಶಯರೇನು! ಕತ್ತಿಯನ್ನು ಆಡಿಸಿ ಏನೂ ಪ್ರಯೋಜನವಿಲ್ಲ. ನೀವೂ ನಿಮ್ಮ ಕತ್ತಿಯೂ ಹಾವೂ ಕಪಾಲವೂ ದಯಮಾಡಿರಿ ಹೀಗೆ!" ಎಂದನು ಗೇಲಿಯಾಗಿ ನಗುತ್ತಾ.

ಏಕಾಕ್ಷಿ ಮಾಂತ್ರಿಕನು ತನ್ನ ಒಕ್ಕಣ್ಣನ್ನು ಇಷ್ಟಗಲ ತೆರೆದು ಏನೋ ಹೇಳಲು ಬಾಯಿ ತೆರೆಯಲು, ಚತುರ್ನೇತ್ರನು ದೊಡ್ಡ ಧ್ವನಿಯಿಂದ, "ನರವಾನರಾ! ಉಲೂಕಾ!" ಎಂದು ಕೂಗಿದನು. ಆ ಕೂಡಲೇ




"ಗೂಂ" ಎನ್ನುತ್ತ ಕರಿಗೂಗೆಯೂ, ಕಿರ್ರನೆ ಕೂಗುತ್ತ ನರವಾನರವೂ ಅಲ್ಲಿಗೆ ಬಂದುವು. ಅವುಗಳನ್ನು ನೋಡಿ ಏಕಾಕ್ಷಿ ಮಾಂತ್ರಿಕನು ಒಂದಡಿ ಹಿಂದಿಟ್ಟನು, ಏಕಾಕ್ಷಿ ಹೆದರಿದನೆಂಬುದನ್ನು ಅರಿತು ಚತುರ್ನೇತ್ರನು "ಎಲೋ ಉಲೂಕೇಶ್ವರಾ! ಈ ದುಷ್ಟ ಮತ್ತೆ ಬಂದಿದ್ದಾನೆ ನೋಡು! ಇವನ ಒಂದು ಕಣ್ಣಿನ ರುಚಿ ಈ ಮೊದಲೇ ನೋಡಿದ್ದೀ. ಈಗ ಅವನ ಎರಡನೇ ಕಣ್ಣನ್ನು ಕೂಡಾ ಕಿತ್ತು ರುಚಿ ನೋಡು! ತಾನಾಗಿಯೇ ಕೊಡಲು ಬಂದಿದ್ದಾನೆ" ಎಂದನು.

ಮರು ಕ್ಷಣವೇ ಕರಿಗೂಗೆ ಏಕಾಕ್ಷಿ ಮಾಂತ್ರಿಕನ ಕಡೆಗೆ ಹಾರಿತು. ಏಕಾಕ್ಷಿ ಗಾಬರಿಯಿಂದ ಸ್ವರವು ತಪ್ಪಿಬ್ಬಾದಂತೆ, "ಹೋಯ್! ಕಂಟಾಳಾ! ಕಂಪಾಲಾ! ಹೊಡೆಯೋ! ಗುದ್ದೋ" ಎಂದು ಒಂದೇ ಸಮನೆ ಕೂಗಿದನು. ಅವನೊಂದಿಗೆ ಆಕಾಶ ದಲ್ಲಿ ಚಲಿಸುವ ಮನುಷ್ಯಕಪಾಲವು ತನ್ನ ಬೊಚ್ಚು ಬಾಯಿಯನ್ನು ಕದಲಿಸುತ್ತ ಮುಂದೆ ಬಂದು ಕರಿ ಗೂಗೆಯ ಮೇಲೆ ತಾಗಿತು.

ಅದನ್ನು ನೋಡಿ ಏಕಾಕ್ಷಿ ಕತ್ತಿಯನ್ನು ಕುಣಿಸುತ್ತ ಉತ್ಸಾಹದಿಂದ ಗಟ್ಟಿಯಾಗಿ ನಕ್ಕನು. ಚತುರ್ನೇತ್ರನು ಅತ್ಯುಗ್ರನಾಗಿ "ನರವಾನರಾ!" ಎಂದು ಕೂಗಿದನು. ನರವಾನರವು ಒಮ್ಮೆಗೇ ಬಂಡೆಬಿದ್ದ ಹಾಗೆ ಏಕಾಕ್ಷಿಯ ಕಡೆಗೆ ಹಾರಿತು. "ಕಾಲಭುಜಂಗಾ!" ಎಂದು ಕೂಗಿ ಏಕಾಕ್ಷಿ ಹಿಂದೆ ಹಾರಿದನು. ಆಗ ಸರ್ಪವು ಭುಸ್ಸೆಂದು ಅಷ್ಟೆತ್ತರ ಹಾರಿ ನರವಾನರಕ್ಕೆ ಅಡ್ಡ ನಿಂತು ಜಡೆ ಯೆತ್ತಿ ಹೊಡೆಯಿತು. ನರವಾನರವೂ ಮಹಾ ಸರ್ಪವೂ ಒಂದರ ಮೇಲೊಂದು ಬಿದ್ದು ಹೊಡೆದಾಡ ತೊಡಗಿದುವು. ಆಕಾಶದಲ್ಲಿ ಗೂಗೆ, ತಲೆ ಬುರುಡೆಗಳ ಜಗಳ, ತಾಕಲಾಟ!

ಸಮರಸೇನನೂ ಸೈನಿಕರೂ ಪೊದರುಗಳ ಹಿಂದೆ ಅಡಗಿ ಆ ವಿಲಕ್ಷಣ ಹೋರಾಟವನ್ನು ನೋಡ ತೊಡಗಿದರು. "ಸಮಾನ ಉಜ್ಜಿಗಳೆಂದರೆ ಹೀಗಿರ ಬೇಕು!" ಎಂದನು ಒಬ್ಬ ಸೈನಿಕ. "ಪುಣ್ಯಕಾಲ! ಇವರ ಮುಂದೆ ನಾವು ಅಲ್ಪ ಜೀವಿಗಳಾದುದರಿಂದ ಬದುಕಿಕೊಂಡಿದ್ದೇವೆ!" ಎಂದನು ಸಮರಸೇನ.

ಏಕಾಕ್ಷಿ ಮಾಂತ್ರಿಕನ ಭೃತ್ಯರಿಗೂ, ಚತುರ್ನೇತ್ರ ಮಾಂತ್ರಿಕನ ಭೃತ್ಯರಿಗೂ ದೊಡ್ಡ ಯುದ್ಧವು ನೆಲ ದಲ್ಲಿಯೂ ಬಾನಿನಲ್ಲಿಯೂ ಸ್ವಲ್ಪ ಹೊತ್ತು ನಡೆ ಯಿತು. ಮಾನವಕಪಾಲವು ತನ್ನ ಬೋಳು ಬಾಯಿ ಯಿಂದ ಕರಿಗೂಗೆಯನ್ನು ಆಗಾಗ ಹಿಡಿದುಕೊಳ್ಳು ತ್ತಿತ್ತು. ಗೂಗೆ ತಪ್ಪಿಸಿಕೊಳ್ಳುತ್ತಿತ್ತು. ನರವಾನರ ವನ್ನು ತನ್ನ ಶರೀರದಿಂದ ಸುತ್ತಿಬಿಗಿಯಲು ಕಾಲ ಭುಜಂಗವು ಪ್ರಯತ್ನಿಸುತ್ತಿತ್ತು.

ಈ ಹೋರಾಟವು ಬೇಗದಲ್ಲಿ ಮುಗಿಯುವಂತಹು ದಲ್ಲವೆಂದು ಇಬ್ಬರಿಗೂ ಗೊತ್ತಿತ್ತು. ತಮ್ಮ ಬಂಟರ ಹೋರಾಟ ನೊಡುತ್ತ, ಇಬ್ಬರೂ ಮಂತ್ರವನ್ನು ಗುಣಗುಣಿಸುತ್ತ. "ಹಾಗೆ ಹಿಡಿ! ಬಿಡಬೇಡಾ! ಜಜ್ಜೋ! ಬಿಡ ಬಿಡ್ವೋ ಅಪ್ಪಳಿಸು!" ಎಂದು

ಪ್ರೋತ್ಸಾಹ ಕೊಡುತ್ತ ನಿಂತಿದ್ದರು ಇಬ್ಬರೂ. ಇದ್ದಕ್ಕಿದ್ದ ಹಾಗೆ ಚತುರ್ನೇತ್ರನು ಒಂದು ಗರ್ಜನೆ ಹಾಕಿ, ತನ್ನ ಟೋಪಿಯನ್ನು ಮೇಲೆತ್ತಿ, "ಓಂ ಹ್ರೀಂ ಹ್ರಾಂ" ಎನ್ನುತ್ತ ಅದೃಶ್ಯನಾದನು. ಆ ಕೂಡಲೇ ಕರಿಗೂಗೆಯೂ ನರವಾನರವೂ ಮಾಯವಾಗಿ ಹೋದುವು.

ಏಕಾಕ್ಷಿ ಮಾಂತ್ರಿಕನು ಮುಖವನ್ನು ಗಂಭೀರ ಮಾಡಿಕೊಂಡು, "ಛೀ ! ಛೀ ! ಹೇಡಿ ! ಪುಕ್ಕ ! ಅದೃಶ್ಯನಾದೆಯೇನು ? ಎಷ್ಟು ಕಾಲ ಹೀಗೆ ತಪ್ಪಿಸಿಕೊಂಡು ತಿರುಗುವಿಯೊ ನೋಡುತ್ತೇನೆ." ಎಂದು ಹೂಂಕರಿಸಿದನು.

ಒಂದು ನಿಮಿಷದವರೆಗೆ ಏಕಾಕ್ಷಿ ಏನೋ ಆಲೋಚಿಸುತ್ತ ಸುಮ್ಮನಿದ್ದು, ತಾನು ಅಲ್ಲಿಗೆ ಬರುವಾಗ ಕಣ್ಣಿಗೆ ಬಿದ್ದ ಮನುಷ್ಯರು ಎತ್ತ ಹೋದರೆಂದು ಸುತ್ತಲೂ ನೋಡಿದನು. ಪೊದೆಗಳ ಮರೆಯಲ್ಲಿ ಅಡಗಿದ್ದವರು ಅವನ ಕಣ್ಣಿಗೆ ಬೀಳಲಿಲ್ಲ.

ಅವನು ಗಟ್ಟಿಯಾಗಿ ಒಂದು ಸಾರಿ ಹಲ್ಲು ಮಸೆದು, ಚತುರ್ನೇತ್ರನ ಭಟ ಪ್ರಾಣಿಗಳೊಂದಿಗೆ ಹೋರಾಡಿ ಬಸವಳಿದು ಹೋದ ತನ್ನ ಸರ್ಪವನ್ನೂ, ಕಪಾಲವನ್ನೂ ಮುಟ್ಟಿತಟ್ಟಿ ತಡವಿ ಸಮಾಧಾನ ಪಡಿಸಿದನು. ತಳತಳಿಸುವ ತನ್ನ ಕತ್ತಿಯನ್ನು ಆಡಿಸುತ್ತಾ ಮರಗಳ ಕೊಂಬೆಗಳ ಕಡೆಗೆ ನೋಡಿದನು. ಇನ್ನೂ ಅವನಿಗೆ ಕರಿಗೂಗೆಯ ಭಯ ಹೋಗಲಿಲ್ಲ. ಅದು ಹಿಂದೆ ಒಂದು ಸಾರಿ ಅವನ ಕಣ್ಣನ್ನು ಬಲವಾದ ತನ್ನ ಮೂಗಿನಿಂದ ಕುಕ್ಕಿ ಎತ್ತಿ ಹಾಕಿತ್ತು. ಆ ಗೂಗೆಯ ಶಬ್ದ ಕೇಳಿದರೆ ಆ ಮಾಂತ್ರಿಕನಿಗೆ ಭಯದಿಂದ ಮೈನವಿರೇಳುತ್ತಿದ್ದಿತು.

ತರುವಾಯ ಏಕಾಕ್ಷಿ ಮಾಂತ್ರಿಕನು ಕಪಾಲವನ್ನೂ ಕಾಲಭುಜಂಗವನ್ನೂ ಕರೆದುಕೊಂಡು ಅಲ್ಲಿಂದ ಹೊರಟು ಹೋದನು. ಭಯನಿವಾರಣೆಯಾದಂತೆ, ಸಮರಸೇನನೂ, ಸೈನಿಕರೂ ಪೊದರಿನ ಮರೆಯಿಂದ ಹೊರಗೆ ಬಂದರು.

ಮತ್ತೆ ಸಮರಸೇನನು ಸೈನಿಕರನ್ನು ಕರೆದುಕೊಂಡು ಪೂರ್ವ ತೀರದಲ್ಲಿರುವ ತಮ್ಮ ಹಡಗಿನ ಕಡೆಗೆ ಹೋಗಲು ಹೊರಟನು. ಅವನು ನಾಲ್ಕಾರು ಅಡಿಗಳನ್ನು ತೆಗೆದಿರಬಹುದು; ಅಷ್ಟರಲ್ಲಿ ಭೂಮಿ ನಡುಗುವ ಹಾಗೆ ಸಿಡಿಲಿನಂತಹ ಶಬ್ದ ಹೊರಡ ತೊಡಗಿತು. ಸಮರ ಸೇನಾದಿಗಳು ಬೆಜ್ಜರ ಬಿದ್ದು ಆಕಾಶದ ಕಡೆಗೆ ನೋಡಿದರು. ಸಮೀಪದಲ್ಲಿದ್ದ ಪರ್ವತದ ಮೇಲಿಂದ ಅಗ್ನಿದ್ರಾವಕಗಳೂ, ಜ್ವಾಲೆಗಳೂ ಬೆಂಕಿಯ ಕಿಡಿಗಳೂ ಹೊರಡುತ್ತಿದ್ದುವು. ಕರ್ರಗಿನ ಹೊಗೆಯಿಂದ ಆಕಾಶವು ಕರ್ರಗಾಗುತ್ತಿದ್ದಿತು. ಸಮರ ಸೇನ ಮೊದಲಾದವರು ನಿಂತಲ್ಲೇ ನಿಂತು ಆ ಅಗ್ನಿಪರ್ವತದ ಜ್ವಾಲೆಯನ್ನೇ ನೋಡುತ್ತಿದ್ದರು. —(ಇನ್ನೂ ಇದೆ)





# ಮುಳ್ಳು ನಾಲಗೆ

**ಬಾ**ರಿಬಾರಿಗೂ ಬೇತಾಳಗ್ರಹಣ ಮಾಡುತ್ತ ಅದನ್ನೊಂದು ವಿನೋದವನ್ನಾಗಿಸಿಕೊಂಡ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲಿಗೇರಿಸಿಕೊಂಡು, ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಹುದುಗಿದ್ದ ಬೇತಾಳವು ಶವದ ಬಾಯಿಯ ಮೂಲಕ, "ಎಲೈ, ಮಹಾರಾಜನೇ! ನಿಶ್ಚಯವಾಗಿಯೂ ನಿನ್ನ ಸ್ವಭಾವವು ಅಚಲವಾದುದೇ! ಇಂತಹ ಸ್ವಭಾವ ಉಳ್ಳವರು ಕೂಡಾ, ಮಾನವಾತೀತವೆನಿಸುವ ಶಕ್ತಿಯ ಪ್ರಭಾವಕ್ಕೆ ಗುರಿಯಾಗಿ ಮಾರ್ಪಟ್ಟು ಬಿಡುವುದೂ ಉಂಟು. ಇದಕ್ಕೆ ನಿದರ್ಶನವಾಗಿ ನಿನಗೆ ವೀರಕೇಸರಿ ಎಂಬ ಮುಳ್ಳು ನಾಲಗೆಯುವನ ಅದ್ಭುತ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಸಂತೋಷವಾಗಿ ಕಥೆ ಕೇಳುತ್ತಾ ನಡೆ" ಎಂದು ಕಥೆಯನ್ನು ಹೇಳಲು ಪ್ರಾರಂಭಿಸಿತು:

ವೀರಕೇಸರಿ ಎಂಬವನು ಎಲ್ಲರ ಹಾಗೆಯೇ ಒಬ್ಬ ಮನುಷ್ಯ. ಅವನದೊಂದು ಅಸಾಧಾರಣವಾದ

ಬೇತಾಳಕಥೆಗಳು?...



ಮುಖ್ಯ ಗುಣವೇನೆಂದರೆ, ದುಡುಕು ದುಷ್ಟ ಮಾತು. ಜನರು ಅವನನ್ನು ಹಿಂದಿನಿಂದ ಮುಳ್ಳುನಾಲಗೇ ಮನುಷ್ಯ ಅನ್ನುತ್ತಿದ್ದರು. ಅವನು ಯಾರನ್ನಾದರೂ ನೋಡಿದರೆ ಸಾಕು. ಪಟಕ್ಕನೆ ಏನೋ ಒಂದು ಕೆಟ್ಟ ಮಾತು ಹೇಳದೆ ಇರಲಾರ. ಅದರ ಮೇಲೆ ಮುಂಗೋಪ ಬೇರೆ. ಆದುದರಿಂದ ಯಾರಿಗೂ ಅವನನ್ನು ಕಂಡರೆ ಹಿಡಿಸುವುದಿಲ್ಲ. ಎಲ್ಲರೂ ಅವನನ್ನು ಅಸಂಹಿಸಿಕೊಳ್ಳುತ್ತಿದ್ದರು.

ಅವನ ಹೆಂಡತಿ ಸಾತ್ವಿಕಳಾದ ಶಾಂತಗುಣದವಳು. ಅವನ ಮಾತುಗಳಿಂದ ಚುಚ್ಚಿಸಿಕೊಳ್ಳಲು ಯಾರಿಗೆ ತಪ್ಪಿದರೂ ಅವಳಿಗೆ ಮಾತ್ರ ತಪ್ಪುವಂತಿರಲಿಲ್ಲ. ಇದನ್ನು ನೋಡಿ ಅವಳ ಅಣ್ಣನಾದ ಸಾಂಬಶಿವನು ತುಂಬಾ ನೊಂದುಕೊಳ್ಳುತ್ತಿದ್ದನು. ಕಡೆಗೆ ಅವನು ಸಹಿಸಲಾರದೆ ತನ್ನ ಬಾವಯ್ಯನಿಗೆ ಬುದ್ಧಿ ಕಲಿಸಲೇ ಬೇಕೆಂದು ನಿಶ್ಚಯಿಸಿದನು. ಅಂತಲೇ ಒಂದು ದಿನ ಸಾಂಬಶಿವನು ತನ್ನ ಗ್ರಾಮದಿಂದ ಒಬ್ಬ ದೊಡ್ಡ ಮಲ್ಲನನ್ನು ಕರೆಯಿಸಿದನು. ಆ ಮಲ್ಲನು ಗ್ರಾಮದಲ್ಲಿ ತನ್ನ ಬಲವನ್ನು ಪ್ರದರ್ಶಿಸುತ್ತ, "ನನ್ನೊಂದಿಗೆ ಮಲ್ಲಯುದ್ಧ ಮಾಡುವಂಥವರು ಈ ಗ್ರಾಮದಲ್ಲಿ ಯಾರಿದ್ದಾರೋ ಅಂತ ನೋಡಲಿಕ್ಕಾಗಿಯೇ ಬಂದಿದ್ದೇನೆ" ಎಂದನು.

ಯಾರೂ ಮಾತಾಡದಿರಲು, ಗುಂಪಿನಲ್ಲಿದ್ದ ವೀರಕೇಸರಿ, "ಏನಯ್ಯಾ ಮಹಾಮಲ್ಲಾ! ಇಲ್ಲಿ ಮಲ್ಲರಾರೂ ಇಲ್ಲವೆಂದು ಮುಂದಾಗಿ ತಿಳಿದೇ ಹೀಗೆ ಜಂಭ ಕೊಚ್ಚಿಕೊಳ್ಳುವೆಯೇನು?" ಎಂದು ಜೋರಿನಿಂದ ಕೇಳಿದನು.

ಈ ಮಾತಿನಿಂದ ಮಲ್ಲನಿಗೆ ಕೋಪ ಬಂತು. "ಈ ಮಾತು ಹೇಳಿದವನು ಗುಂಪಿನೊಳಗಿನಿಂದ ನನ್ನ ಇದಿರಿಗೆ ಬಂದು ಹೇಳಿದ್ದರೆ ಅವನ ಪ್ರಾಣ ತೇಗೀತಿದ್ದೆ!" ಎಂದನು ಮಲ್ಲ.

"ಏನೋ? ಹೆದರುವೆನೆಂದುಕೊಂಡೆಯಾ? ಇರುವ ಮಾತೇ ಹೇಳಿದ್ದೇನೆ," ಎನ್ನುತ್ತಾ ವೀರಕೇಸರಿ ಜನರ ಗುಂಪಿನಿಂದ ಅವನ ಮುಂದೆ ಬಂದು ಸೆಟೆದು ನಿಂತನು.

ಆ ಮಲ್ಲನು ವೀರಕೇಸರಿಯನ್ನು ಒಂದೇ ಏಟಿಗೆ ಮಣ್ಣು ಮುಕ್ಕಿಸಿ, "ನರಹುಳ!" ಎಂದು ಅಟ್ಟಹಾಸ ಮಾಡಿದನು.

ಆ ಮೇಲೆ ಸಾಂಬಶಿವ ಮೊದಲಾದವರು ವೀರಕೇಸರಿಯನ್ನು ಎತ್ತಿ ನೀವಿ ಸರಿಪಡಿಸಿದರು. ಸಾಂಬಶಿವನು ಅವನೊಂದಿಗೆ, "ನಿಮ್ಮ ಬಾಯಿ ದುಡುಕಿನಿಂವ ಎಷ್ಟು ಕಷ್ಟ ಬಂತು ಗೊತ್ತಾಯಿತಷ್ಟೆ?" ಎಂದನು.

"ಏಟು ತಿಂದು ಬಿದ್ದರೇನಾಯಿತು ಮಹಾ? ಅಷ್ಟು ದೊಡ್ಡ ಮಲ್ಲನ ಮುಂದೆ ನಿಂತು ಮಾತಾಡುವ ಧೈರ್ಯಶಾಲಿ ನನ್ನ ಹೊರತು ಈ ಊರಿನಲ್ಲಿ ಇನ್ನೊಬ್ಬ ಇಲ್ಲದೆ ಹೋದನಲ್ಲಾ?" ಎಂದನು ವೀರಕೇಸರಿ.

ಅವನ ಸ್ವಭಾವ ಸತ್ತರೂ ಬದಲಾಗುವಂತಹುದು ಅಲ್ಲವೆಂದು, ಸಾಂಬಶಿವನು ನಿಶ್ಚಯಿಸಿಕೊಂಡನು. ನಿರಾಶೆಯಿಂದ ಅವನು ತನ್ನ ಪ್ರಯತ್ನವನ್ನು ವಿರಮಿಸಿ ಕೊಳ್ಳಬೇಕಾಯಿತು.

ಒಂದು ದಿನ ವೀರಕೇಸರಿ ಮನೆಯಲ್ಲಿಲ್ಲದ ವೇಳೆ ಯಲ್ಲಿ ಒಬ್ಬ ಯತಿ ಅವರ ಮನೆಗೆ ಬಂದನು. ವೀರಕೇಸರಿಯ ಹೆಂಡತಿ ಅವನೊಂದಿಗೆ ತುಂಬ ವಿನಯದಿಂದ, "ಸ್ವಾಮಿ, ತಮ್ಮಂಥವರಿಗೆ ಆತಿಥ್ಯ ಕೊಡಬೇಕೆಂದು ನನ್ನ ಮನಸ್ಸು ತುಂಬಾ ಹಾತೊರೆ ಯುತ್ತದೆ. ಆದರೆ ನನ್ನ ಗಂಡನ ಎದುರುಸಿಟ್ಟಿನ ಮುಳ್ಳುನಾಲಗೆಗೆ ಹೆದರಿ ಏನೂ ಮಾಡಲಾಗದ ಸ್ಥಿತಿ ಯಲ್ಲಿದ್ದೇನೆ. ನನ್ನನ್ನು ಕ್ಷಮಿಸಿ ತಾವು ಬೇರೆ ಮನೆಗೆ ಹೋದರೇ ಕ್ಷೇಮ. ದಯ ಮಾಡಿ ನನ್ನ ಮೇಲೆ ಕೋಪಿಸಬಾರದು." ಎಂದು ಪ್ರಾರ್ಥಿಸಿಕೊಂಡಳು,

"ಗೊತ್ತಾಯಿತು ಅಮ್ಮಾ. ನೀನು ಧೈರ್ಯದಿಂದ ನನಗೆ ಆತಿಥ್ಯ ನೀಡು. ಊಟ ಹಾಕು. ನಿನ್ನ ಗಂಡನ ನಾಲಗೆಯನ್ನು ನಾನು ಸರಿ ಮಾಡಿ ಬಿಡುತ್ತೇನೆ. ಚಿಂತಿಸ ಬೇಡ" ಎಂದನು ಯತಿ. ಅವನ ಮಾತಿನ ಮೇಲೆ ವಿಶ್ವಾಸ ವಿಟ್ಟು ಆ ಗೃಹಿಣಿ ಯತಿಗೆ ಭೋಜನ ಬಡಿಸಿದಳು.

ಯತಿ ಭೋಜನ ಮಾಡುತ್ತಿರುವಾಗಲೇ ವೀರಕೇಸರಿ ಮನೆಗೆ ಬಂದು ಯತಿಯನ್ನು ನೋಡಿದ ಕೂಡಲೇ, "ಕಳ್ಳ ಯತಿ ! ಹೊಟ್ಟೆ ತುಂಬಿಸಲಿಕ್ಕಾಗಿ ಗಡ್ಡ ಮೀಸೆ ಬೆಳೆಸಿಕೊಂಡು ತಿರುಗುವ ಬದಲಿಗೆ. ಬೆನ್ನು ಬಗ್ಗಿಸಿ ಕೆಲಸ ಮಾಡಿ ತಿಂದು ಬದುಕ ಬಾರದೆ ? " ಎಂದು ಬೈದನು.

"ನನ್ನನ್ನು ಹಾಗೆ ತಿಳಿಯಬೇಡ, ನಾನು ವಾಕ್ಸಿದ್ಧಿ ಪಡೆದ ಯತಿ, ನನ್ನನ್ನು ಬೈಯುವುದರಿಂದ ನಿನಗೆ ಕ್ಷೇಮವಾಗಲಾರದು." ಎಂದನು ಯತಿ ವೀರಕೇಸರಿ ಯನ್ನು ನೋಡುತ್ತಾ.

"ನಿನ್ನ ಗೊಡ್ಡು ಬೆದರಿಕೆಗೆ ಹೆದರುವೆನೆಂದು ಕೊಂಡೆಯಾ ಫರಕು ಚಿಂದಿಗಳ ಸನ್ಯಾಸಿ !" ಎಂದು ವೀರಕೇಸರಿ ಕೋಪದಿಂದ ಕಣ್ಣು ಕೆಕ್ಕರಿಸಿ ನೋಡಿದನು.





ಹೀಗಾಗುವುದರಿಂದ ಅವನೆಂದರೆ, ಅವನ ಬೈಗಳೆಂದರೆ ಯಾರಿಗೂ ಲಕ್ಷ್ಯವಿಲ್ಲದೆ ಹೋಯಿತು. ಅಥವಾ ಇನ್ನೊಮ್ಮೆ ಬೈಯಲಿ ಎನಿಸುತ್ತಿತ್ತು. ಇದನ್ನು ತಿಳಿದು ವೀರಕೇಸರಿಯಲ್ಲಿ ಏನೋ ಬದಲಾವಣೆಯಾಗಲು ಪ್ರಾರಂಭವಾಯಿತು. ಅವನು ತನ್ನ ಸಿಟ್ಟನ್ನು ಆಗಾಗ ನುಂಗಿಕೊಂಡು, ಒಳ್ಳೆಯ ಮಾತನ್ನು ಹೇಳ ತೊಡಗಿದನು. ಆದರೆ ಆ ಒಳ್ಳೆಯ ಮಾತಿಗೆ ವಿರುದ್ಧವಾಗಿ ಅವರಿಗೇನೂ ಒಳಿತಾದುದು ಮಾತ್ರ ಇಲ್ಲವೇ ಇಲ್ಲ. ಹಾಗೆಯೇ ಅವನು ತನಗೆ ಇಷ್ಟವಾದವರನ್ನು ನೋಡಿ ಬೇಕಂತ ಕೋಪ ತಂದುಕೊಂಡು ಬೈದು ಅವರಿಗೆ ಒಳಿತನ್ನು ಮಾಡಲು ನೋಡಿದನು. ಆದರೆ ಅದರಿಂದ ಅವರಿಗೆ ಯಾವ ಒಳಿತೂ ಆಗದೆ ಹೋಯಿತು.

ಎಷ್ಟೋ ಕಾಲದಿಂದ ಅಭ್ಯಾಸವಾಗಿ ಹೋದ ಮುಳ್ಳುನಾಲಗೆಯ ತುರಿಕೆಯಿಂದ ವೀರಕೇಸರಿ ಥಕ್ಕನೆ ಯಾರನ್ನಾದರೂ ಬೈದು ಬಿಟ್ಟರೆ ಅವರಿಗೆ ಆ ಬೈಗುಳಲ್ಲಿರುವ ಕೆಡುಕಿಗೆ ವಿರುದ್ಧವಾಗಿ ಒಳಿತಾಗುತ್ತಲೇ ಇದ್ದಿತು. ಹೀಗಾಗಿ ಕ್ರಮೇಣ ವೀರಕೇಸರಿಯ ನಾಲಗೆಮುಳ್ಳು ಮೊನೆ ಸವೆದು ಮೊಂಡಾಯಿತು. ಸಿಟ್ಟು ಬಂದರೂ ಅವನ ಬಾಯಿಯಿಂದ ಕೆಟ್ಟ ಮಾತು ಬರುವುದು ನಿಂತು ಹೋಯಿತು, ಎಲ್ಲರೊಂದಿಗೆ ತುಂಬ ಒಳಿತಾಗಿಯೇ ವ್ಯವಹರಿಸ ತೊಡಗಿದನು. ಇದರಿಂದ ಎಲ್ಲರಿಗಿಂತ ಹೆಚ್ಚು ಸುಖಪಡೆದವಳು ಅವನ ಹೆಂಡತಿಯೇ.

ಬೇತಾಳವು ಹೀಗೆ ಕತೆಯನ್ನು ಮುಗಿಸಿ, "ರಾಜನೇ, ಆ ಯತಿ ವೀರಕೇಸರಿಯಲ್ಲಿ ಬವಲಾವಣೆ ಬರಿಸಿದನೆಂಬುದರಲ್ಲಿ ಸಂದೇಹವೇನಿಲ್ಲ. ಯತಿ ಹೆಚ್ಚೇನೂ ಮಾಡದೆ ಅವನ ಬೈಗಳು ಆಶೀರ್ವಾದವಾಗುವಹಾಗೆ ಮಾಡಿದ್ದಾನೆ, ಅಷ್ಟೇ. ಅಷ್ಟು ಮಾತ್ರಕ್ಕೇ ಚಿಕ್ಕಂದಿನಿಂದಲೂ ಅಭ್ಯಾಸ ಮಾಡಿಕೊಂಡು ಬಂದ ದುಡುಕುತನವನ್ನೂ, ಬಾಯಿ ತುರಿಕೆ

ಮರುಕ್ಷಣದಲ್ಲಿ ಯತಿಯ ಶರೀರದಲ್ಲಿದ್ದ ಹರಕು ಚಿಂದಿಗಳು ಮಾಯವಾಗಿ, ರಾಜಭೂಷಣಗಳಿಂದ ಕಂಡು ಬಂದನು. ಅದನ್ನು ನೋಡಿ ವೀರಕೇಸರಿ ದಿಗ್ಭ್ರಾಂತನಾದನು.

"ಈ ಕ್ಷಣದಿಂದ ನೀನು ಸಿಟ್ಟಿನಲ್ಲಿ ಬೈಯುವ ಕೆಟ್ಟ ಮಾತುಗಳು ವಿರುದ್ಧ ಫಲದಿಂದ ವರವಾಗುತ್ತವೆ!" ಎಂದು ಹೇಳಿ ಯತಿ ಊಟ ಮುಗಿಸಿ ಅಲ್ಲಿಂದ ಹೊರಟು ಹೋದನು,

ಅಂದಿನಿಂದ ವೀರಕೇಸರಿಯ ಜೀವನದಲ್ಲಿ ಅನೇಕ ವಿಚಿತ್ರಗಳು ಪ್ರಾರಂಭವಾದುವು, ಅವನು ಯಾರನ್ನಾದರೂ ನೋಡಿ ನಾಲಗೆ ತೀಟೆ ತೀರಿಸಿಕೊಳ್ಳಲು, "ನಿನ್ನ ಬೆಳೆ ನಾಶವಾಗಿ ಹೋಗ!" ಅಂದರೆ ಅವರ ಹೊಲದಲ್ಲಿ ಎರಡು ಪಾಲು ಬೆಳೆಯಾಗುತ್ತಿದ್ದಿತು, ಮತ್ತಾರನ್ನಾದರೂ ನೋಡಿ, "ನಿನ್ನ ಮನೆ ನೆಲಮಟ್ಟವಾಗಿ ಹೋಗ!" ಎಂದರೆ ಅವರ ಮನೆಯ ಮೇಲೆ ಮತ್ತೊಂದು ಅಂತಸ್ತು ಏಳುತ್ತಿದ್ದಿತು.

ಯನ್ನೂ, ಮೈಮರೆಯುವಂತಹ ಕೋಪವನ್ನೂ ಪೂರ್ಣ ಬಿಟ್ಟುಬಿಡಲು ಹೇಗೆ ಅವನಿಗೆ ಸಾಧ್ಯ ವಾಯಿತು? ಈ ಸಂಶಯಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಒಡೆದೇ ಹೋಗುವುದು ಖಂಡಿತ!" ಎಂದು ಹೇಳಿ ಸುಮ್ಮ ನಾಯಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದು ಉತ್ತರ ಕೊಟ್ಟನು :

ಯತಿಯ ಪ್ರಭಾವ ಸಣ್ಣದೇ ಆದರೂ, ಮಾನ ವನ ಮಾನಸಿಕ ಕ್ರಿಯೆಗಳಿಂದಾಗಿ ವೀರಕೇಸರಿಯ ಸ್ವಭಾವ ಬದಲಾವಣೆಯಾಯಿತು. ಯಾವ ಮನುಷ್ಯ ನಾದರೂ ಇತರರನ್ನು ಬಯ್ಯುವುದು, ಅದು ಅವನಿಗೆ ತಗಲಬೇಕೆಂತಲೇ! ನಿಜವಾಗ ಬೇಕೆಂತಲೇ! ನಿಜ ವಾಗುವುದಿಲ್ಲವೆಂದು ಗಟ್ಟಿ ನಂಬುಗೆ ಇರುವವರು ಕೆಟ್ಟ ಕೆಟ್ಟ ಅರ್ಥವಿಲ್ಲದ ಮಾತಿನಿಂದ ಬಯ್ಯುತ್ತಾರೆ. ತಾಯಿ ಮಗನನ್ನು ಶಪಿಸುತ್ತಾಳೆ. ಕೆಲವು ಮಹಾತ್ಮರ ಬಾಯಿಯಿಂದ ಹೊರಡುವ ಮಾತು ಅಕ್ಷರಶಃ ನಿಜ ವಾಗುವುದೆಂದು ಪುರಾಣಗಳಲ್ಲಿ ನೋಡುತ್ತೇವೆ. ಆದರೆ ಸಾಧಾರಣ ಮನುಷ್ಯರಿಗೆ ಆ ಶಕ್ತಿ ಇರುವುದಿಲ್ಲ. ಆದುದರಿಂದಲೇ ಕೆಲವರಲ್ಲಿ ನಾಲಗೆ ತುರಿಕೆ ಹೆಚ್ಚಾ ಯಿತು. ತಮ್ಮ ಮಾತು ನಡೆಯುವುದಿಲ್ಲವೆಂಬ ನಂಬುಗೆಯಲ್ಲಿ ದುಂದುಡುಕಿನ ಕೋಪಿಷ್ಠರು ಇಷ್ಟ ಬಂದ ಹಾಗೆ ನಾಲಗೆ ಹಾರಿಸುವರು. ಇನ್ನೊಬ್ಬರು ತಮ್ಮ ಬಾಯಿಗೆ ಹೆದರುವರೆಂಬುದೇ ಅವರಿಗಿರುವ ಆತ್ಮತೃಪ್ತಿ. ವೀರಕೇಸರಿಯ ವಿಷಯದಲ್ಲಿ ಯತಿ ಮಾಡಿದುದೆಂದರೆ, ಮುಖ್ಯವಾಗಿ ಅವನ ಬೈಗಳಿಗೆ ಜನರು ಹೆದರುವುದನ್ನು ನಿಲ್ಲಿಸಿದುದೇ. ಅದರ ಮೇಲೆ ತನ್ನ ಬೈಗುಳಿಗೆ ವಿರುದ್ಧ ಫಲ ನಡೆಯುವುದನ್ನು ನೋಡಿ ಅವನ ಮನಸ್ಸಿಗೆ ಮೋಸ ಹೋದಂತೆನಿಸಿತು. ಎಲ್ಲರಿಗೂ ಅವನೊಬ್ಬ ಸಲಿಗೆಯವನಾದನು. ಯಾರೂ ಅವನನ್ನು ಲಕ್ಷಿಸಲಿಲ್ಲ. ಆ ಸ್ಥಿತಿಯಲ್ಲಿ ಅವನು ಇತರರ ದೃಷ್ಟಿಗೆ ದೊಡ್ಡವನಾಗಿ ತೋರಲು, ತನಗೆ ಒಳಿತುಮಾಡಬೇಕೆನಿಸಿದವರನ್ನು ಬೈದನು. ಕೆಡುಕುಮಾಡಬೇಕೆಂಬವರಿಗೆ ಹರಸಿದನು. ಅವೆರಡೂ ಫಲಿಸಲಿಲ್ಲ. ಏಕೆಂದರೆ ಅವನ ಸಹಜ ಸಿಟ್ಟಿನಿಂದ ಹೊರಡುವ ಮಾತಿಗೇ ವಿರುದ್ಧ ಫಲವೆಂದು ಯತಿ ಶಪಿಸಿದ್ದಾನೆ. ಅದನ್ನು ಮಹತ್ವವನ್ನಾಗಿಸಿಕೊಳ್ಳಲು ವೀರಕೇಸರಿ ಬೇಕೆಂತ ಬೈದುದೂ, ಬೇಕಂತ ಹರಸಿ ದುದೂ ನಿಷ್ಫಲವಾದುದು ಆ ಶಾಪಕ್ಕೆ ಸಹಜವೇ. ಇದರಿಂದ ಭಂಗಗೊಂಡ ವೀರಕೇಸರಿ ಎಲ್ಲರಿಂದಲೂ ದೂರವಾಗಿ, ಸಾಧಾರಣ ಮನುಷ್ಯನೇ ಆದನು. ಬೈಯುವ ಅಭ್ಯಾಸ ಮರೆತನು."

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ ಮರದ ಕೊಂಬೆಗೆ ಸೇರಿ ನೇತಾಡ ತೊಡಗಿತು.



# ತಪ್ಪುಗಳ ಬಾಧ್ಯತೆ

ಒಂದು ಗ್ರಾಮದಲ್ಲಿ ನೀರಿಗೆ ದೊಡ್ಡ ಕಷ್ಟ ಬಂತು. ಬತ್ತಿದ ಕೆರೆಯ ಕೆಸರು ತೆಗೆಯಿಸಿ ಆಳಪಡಿಸಿದರೆ ಗ್ರಾಮಸ್ಥರಿಗೆ ನೀರಿನ ಕೊರತೆ ತೀರುತ್ತದೆಂದು ರಾಜನ ಬಳಿಗೆ ನಿವೇದಿಕೆ ಕಳುಹಿಸಲಾಯಿತು.

ಕೆರೆಯನ್ನು ಆಳಪಡಿಸುವಂತೆ ರಾಜನು ಅಪ್ಪಣೆಯನ್ನು ಜ್ಯಾರೀ ಮಾಡಿದನು. ಮಂತ್ರಿ ರಾಜಪ್ರತಿನಿಧಿಗೆ ತಾಖೀದು ಕಳುಹಿಸಿದನು. ರಾಜಪ್ರತಿನಿಧಿ ವ್ಯವಸಾಯ ಶಾಖೆಗೆ ಆದೇಶವಿತ್ತನು. ಕಡೆಗೆ ರಾಜನ ಆಜ್ಞೆ ಗ್ರಾಮಾಧಿಕಾರಿಯ ಕೈಗೆ ಸೇರಿತು.

ಆಮೇಲೆ ತಡವಿಲ್ಲದೆ ಕೆರೆಯ ಕೆಲಸ ಪ್ರಾರಂಭವಾಯಿತು. ಅದು ಬೇಗದಲ್ಲೇ ಮುಗಿದು ಕೆರೆ ನೀರಿನಿಂದ ತುಂಬಿ ಗ್ರಾಮಸ್ಥರಿಗೆ ಸಂತೋಷವಾಯಿತು.

ರಾಜನೇ ಸ್ವತಃ ಹೊರಟು ಬಂದು ನೀರಿನ ಮಟ್ಟ, ಕೆಲಸ ನಡೆದ ರೀತಿ ಮುಂತಾದುವುಗಳ ತನಿಖೆ ನಡೆಸಿ, ರಾಜಧಾನಿಗೆ ಹಿಂದಿರುಗಿ ಮಂತ್ರಿಯೊಂದಿಗೆ, "ಕೆರೆಯ ದುರಸ್ತಿಯ ವಿಷಯದಲ್ಲಿ ತುಂಬಾ ಮರೆ ಮೋಸಗಳಾಗಿವೆ. ಇದಕ್ಕೆಲ್ಲಾ ಯಾರು ಜವಾಬ್ದಾರಿ?" ಎಂದು ಕೇಳಿದನು.

ಮಂತ್ರಿ ಹೆದರಿ ರಾಜಪ್ರತಿನಿಧಿಯ ಹತ್ತಿರ ಸಮಾಧಾನವೇನೆಂದು ಕೇಳಿದನು. ರಾಜಪ್ರತಿನಿಧಿ ತಪ್ಪುಗಳನ್ನು ವ್ಯವಸಾಯ ಶಾಖೆಗೆ ಸರಿಸಿದನು. ಎಲ್ಲರೂ ತಪ್ಪು ತಮ್ಮದಲ್ಲವೆನ್ನುತ್ತ ಗ್ರಾಮಾಧಿಕಾರಿಯ ಮೇಲೆಯೇ ಹಾಕಿದರು.

ರಾಜನು ಗ್ರಾಮಾಧಿಕಾರಿಯನ್ನು ಕರೆಯಿಸಿ ಅವನನ್ನು ಘನವಾಗಿ ಸತ್ಕರಿಸುತ್ತ, "ಹೇಗೆ ಕೆಲಸ ನಡೆಯಿತೆಂಬುದು ಮಂತ್ರಿಯಿಂದ ಹಿಡಿದು ಯಾರಿಗೂ ತಿಳಿಯದು. ಚೆನ್ನಾಗಿ ಕೆಲಸ ನಡೆದಿದ್ದರೆ ತಮ್ಮದೇ ಪ್ರಜ್ಞೆ ಎಂದು ಎಲ್ಲರೂ ಮುಂದೆ ಬರುತ್ತಾರೆ. ತಪ್ಪು ನಡೆಯಿತೆಂದರೆ ಎಲ್ಲರೂ ಇತರರ ಮೇಲೆ ತಳ್ಳುವವರೇ!" ಎಂದು ಹೇಳಿ ಕಳುಹಿಸಿದನು.





# ಕಷ್ಟ ನಷ್ಟಗಳು

ಒಂದು ಊರಿನಲ್ಲಿ ರಾಮನಾಥನೆಂಬವನು ಆ ಊರಿನಲ್ಲಿ ಎಲ್ಲರಿಗಿಂತಲೂ ದೊಡ್ಡವನೆನಿಸಿದ ರೈತ. ಅವನ ಒಬ್ಬನೇ ಒಬ್ಬ ಮಗನಾದ ಸೋಮನಾಥನು ನಗರದಲ್ಲಿ ದೊಡ್ಡ ವಿದ್ಯೆಗಳನ್ನೆಲ್ಲ ಕಲಿತು ಉತ್ತೀರ್ಣನಾಗಿ ಮನೆಗೆ ಹಿಂದಿರುಗಿ ಬಂದನು.

ಹೀಗೆ ಬುದ್ಧಿವಂತನಾಗಿ ಬಂದ ಮಗನ ಮೇಲೆ ವ್ಯವಸಾಯದ ಹೊಣೆಯನ್ನು ವಹಿಸಿ ತಾನು ವಿಶ್ರಾಂತಿ ಪಡೆಯಬೇಕೆಂದು ರಾಮನಾಥನು, ಒಂದು ದಿನ ಮಗನೊಂದಿಗೆ ತನ್ನ ಅಭಿಪ್ರಾಯವನ್ನು ಕುರಿತು ಪ್ರಸ್ತಾವಿಸಿದನು.

ಆದರೆ ಸೋಮನಾಥನಿಗೆ ವ್ಯವಸಾಯ ಮಾಡಲು ಸ್ವಲ್ಪವೂ ಇಷ್ಟವಿರಲಿಲ್ಲ, ಅವನು ತನ್ನ ತಂದೆಯನ್ನು ಕುರಿತು, "ವ್ಯವಸಾಯದ ಕೆಲಸ ಲಾಭದಾಯಕವಲ್ಲವೆಂದೇ ನನಗೆ ತೋರುತ್ತದೆ. ಕಷ್ಟಪಟ್ಟದ್ದಕ್ಕೆ ತಕ್ಕ ಫಲವು ವ್ಯವಸಾಯದಲ್ಲಿ ಸಿಗುವುದೆಂದು ಹೇಳಲು ಸಾಧ್ಯವಿಲ್ಲ. ಅತಿವೃಷ್ಟಿ ಅನಾವೃಷ್ಟಿಗಳಿಂದ ಪಟ್ಟ ಶ್ರಮವೆಲ್ಲಾ ವ್ಯರ್ಥವಾಗಿ ಹೋಗುವುದೇನೋ ಎಂಬ ಭಯ ಯಾವಾಗಲೂ ಇರುತ್ತದೆ. ಇಂತಹ ಕೆಲಸದ ಮೇಲೆ ನಂಬುಗೆಯಿಡಲು ಹೇಗೆ ಸಾಧ್ಯ?" ಎಂದನು.

ಮಗನ ಮಾತುಗಳನ್ನು ಕೇಳಿ ರಾಮನಾಥನು ಬೆರಗಾಗಿ, "ಏನೇನೋ ಹೇಳುವೆಯಲ್ಲ? ಹಾಗಾದರೆ ಮುಂದೆ ಏನು ಮಾಡಬೇಕೆಂದು ನಿನ್ನ ಉದ್ದೇಶ?" ಎಂದು ಕೇಳಿದನು.

"ಅದನ್ನೆ ಆಲೋಚಿಸುತ್ತಿದ್ದೇನೆ, ಸ್ವಲ್ಪ ದಿನ ತಡೆಯಿರಿ, ಹೇಳುತ್ತೇನೆ" ಎಂದು ಹೇಳಿ ಸೋಮನಾಥನು ಆ ಊರಿನಲ್ಲೇ ಲಕ್ಷಗಟ್ಟಲೆ ಹಣ ಹೊರಳಿಸಿಕೊಂಡು ವ್ಯಾಪಾರ ಮಾಡುತ್ತಿದ್ದ ಪ್ರಮುಖ ವ್ಯಾಪಾರಿಯನ್ನು ಸಂಧಿಸಿ ವ್ಯಾಪಾರದ ವಿಷಯವನ್ನು ಪ್ರಸ್ತಾವಿಸಿ, "ನಾನೂ ನಿಮ್ಮ ಹಾಗೆ ವ್ಯಾಪಾರ ಮಾಡಬೇಕೆಂದಿದ್ದೇನೆ. ಯಾವ ಬಗೆಯ ವ್ಯಾಪಾರವು ಲಾಭದಾಯಕವಾಗಿದೆ?" ಎಂದು ಕೇಳಿದನು.

ವ್ಯಾಪಾರಿ ದೊಡ್ಡದೊಂದು ನಿಟ್ಟುಸಿರುಬಿಟ್ಟು, "ಏನು ವ್ಯಾಪಾರವಪ್ಪಾ? ತುಂಬಾ ಓದಿಕೊಂಡವನು. ಕಣ್ಣು ಬಿಡಿಸಿಕೊಂಡೇ ಈ ಗಜಿಬಿಜಿ ವ್ಯವಹಾರದಲ್ಲಿ ಕಾಲು ಹಾಕಬೇಕೆಂದಿರುವೆಯಲ್ಲಾ! ಈಗ ವ್ಯಾಪಾರವು ಹಿಂದಿನ ಕಾಲದ ಹಾಗೆ ಲಾಭದಾಯಕವಾಗಿ ಬರುವುದೇ ಇಲ್ಲ. ವ್ಯಾಪಾರಸ್ಥರು ಜಾಸ್ತಿಯಾದರು. ಪೈಪೋಟಿ ಹೆಚ್ಚಾಯಿತು. ಯಾವುದೇ

ಜಿ. ಶಿವಕುಮಾರ

ವ್ಯಾಪಾರ ಮಾಡುವ ಯಾರಿಗೂ ಸುಖ ಶಾಂತಿ ಎರಡೂ ಇಲ್ಲ" ಎಂದನು.

ವ್ಯಾಪಾರದಲ್ಲಿರುವ ಕಷ್ಟನಷ್ಟಗಳನ್ನು ಕುರಿತು ವಿವರವಾಗಿ ತಿಳಿದುಕೊಂಡ ಮೇಲೆ, ಸೋಮನಾಥನಿಗೆ ವ್ಯಾಪಾರದ ಮೇಲೆ ವಿಮುಖತೆಯುಂಟಾಯಿತು.

ಅವನು ಅಲ್ಲಿಂದ ನೆಟ್ಟಗೆ ನಗರಕ್ಕೆ ಹೋಗಿ, ಪ್ರಮುಖನಾದೊಬ್ಬ ರಾಜೋದ್ಯೋಗಿಯನ್ನು ಸಂಧಿಸಿ, ತನ್ನ ವಿಷಯವನ್ನು ಹೇಳಿ ರಾಜನ ಆಸ್ಥಾನದ ಯಾವ ಶಾಖೆಯಲ್ಲಾದರೂ ತನಗೊಂದು ಉದ್ಯೋಗ ಕೊಡಿಸಬೇಕೆಂದು ಕೇಳಿಕೊಂಡನು.

"ರಾಜನ ಕೈಕೆಳಗೆ ಕೆಲಸ ಮಾಡುತ್ತೇನೆಂದು ಹೇಳುವ ಮನಸ್ಸು ನಿನಗೇಕೆ ಬಂತಪ್ಪ ? ರಾಜಾಸ್ಥಾನದಲ್ಲಿ ಉದ್ಯೋಗ ಮಾಡುವುದೆಂದರೆ ಕತ್ತಿಯ ಮೇಲೆ ಸಾಮು ಮಾಡಿದಂತೆ. ರಾಜನಿಗೆ ಅನುಗ್ರಹ ಬಂದರೂ, ಆಗ್ರಹವೇ ಬಂದರೂ ನಮಗೆ ಕಷ್ಟವೇ. ಆತ್ಮಾಭಿಮಾನವನ್ನು ಕೊಂದುಕೊಂಡು ನೌಕರಿ ನಿಭಾಯಿಸಬೇಕು, ಎಷ್ಟು ಮಾಡಿದರೂ ಹೆಸರು ಬರುವುದಿಲ್ಲ. ನೀನು ಓದಿಕೊಂಡವನು. ಬುದ್ಧಿ ತಿಳಿದವನು. ನಿನ್ನ ಈ ತಿಳುವಳಿಕೆಗಳನ್ನೆಲ್ಲಾ ವ್ಯವಸಾಯದಲ್ಲೇ ತೋರಿಸಿದೆಯೆಂದರೆ ನೀನಿಷ್ಟು ತಿಂದು ಹತ್ತು ಮಂದಿಗಳಿಗೂ ಇಷ್ಟಿಷ್ಟು ಕೊಡಬಲ್ಲವನಾಗುವೆ. ಉದ್ಯೋಗದ ಜೀವನವೆಂದರೆ ಸಾಕೂ ಸಾಲದಂತಹ ಜೀವನ. ಕತ್ತೆಯ ಜೀವನದಂತೆ ಅನ್ನು. ಇಷ್ಟಾದರೂ ಉದ್ಯೋಗ ಸಿಗುವುದೆಂದರೆ ಮಾತಾಡಿದ ಹಾಗೆ ಅಲ್ಲ. ಎಷ್ಟೋ ಅಧಿಕಾರಿಗಳ ಕಾಲಿಗೆ ಬೀಳಬೇಕು" ಎಂದನು ರಾಜೋದ್ಯೋಗಿ.

ಅಷ್ಟು ಕೇಳಿದ ಮೇಲೆ ಸೋಮನಾಥನು ಇಳಿಮೋರೆ ಮಾಡಿಕೊಂಡು ಮನೆಗೆ ಬಂದನು. ರಾಮನಾಥನು ಮಗನ ಸಂಗತಿಯನ್ನು ಅರಿತುಕೊಂಡು ಹೀಗೆಂದನು : "ನೀನು ವ್ಯವಸಾಯದಲ್ಲಿ ಕಷ್ಟನಷ್ಟಗಳಿರುವುದೆಂದು ಅಂದುಕೊಂಡಿದ್ದೀ ಹೌದಾ ? ಅದು ನಿನ್ನ ತಪ್ಪಲ್ಲ. ಬರೀ ವ್ಯವಸಾಯದ ಅನುಭವಮಾತ್ರ ಇದ್ದ ನಿನಗೆ, ದೂರದ ಬೆಟ್ಟಗಳು ನುಣ್ಣಗೆ ಕಂಡಿವೆ. ನಿಜ ಸಂಗತಿ ಏನೆಂದರೆ, ಎಲ್ಲಿ ಲಾಭವಿದೆಯೋ ಅಲ್ಲೆಲ್ಲಾ ಅಷ್ಟೋ ಇಷ್ಟೋ ನಷ್ಟವೂ ಇರುತ್ತದೆ. ಹಾಗೆಯೇ ಸುಖವಿರುವ ಕಡೆಯಲ್ಲಿ ಅಲ್ಪಸ್ವಲ್ಪಕಷ್ಟವೂ ಇರುತ್ತದೆ. ಪೂರ್ತಿ ಸುಖವಿರುವ ಪೂರ್ತಿ ಲಾಭವಿರುವ ಕೆಲಸ ಎಲ್ಲಿಯೂ ಇಲ್ಲ. ಜೀವನದಲ್ಲಿ ಕಷ್ಟನಷ್ಟಗಳು ಅಡಿಗಡಿಗೂ ಬರುತ್ತವೆ. ದೃಢದೀಕ್ಷೆಯೂ ಆತ್ಮಸ್ಥೈರ್ಯವೂ ಬೇಕು. ಇವೆರಡಿದ್ದರೆ ಎಷ್ಟು ಕಷ್ಟನಷ್ಟಗಳಿದ್ದರೂ ಅವುಗಳನ್ನು ಇದಿರಿಸಿ ಜಯಿಸಬಹುದು."

ಸೋಮನಾಥನು ತಂದೆಯ ಮಾತಿನಿಂದ ಸ್ಥಿರಮನಸ್ಕನಾಗಿ, ವ್ಯವಸಾಯದಲ್ಲಿ ಸಮರ್ಥನೆನಿಸಿಕೊಂಡು ಉನ್ನತಿಗೆ ಬಂದನು.



# ಜ್ಞಾನೋದಯ

**ಕೇ**ಶವನ ತಂದೆ ತನಗಿದ್ದ ಆಸ್ತಿಪಾಸ್ತಿಗಳನ್ನು ಮಾರಿ ಮಗನನ್ನು ದೊಡ್ಡ ವಿದ್ಯಾವಂತನನ್ನಾಗಿ ಮಾಡಿ, ಮಹಾರಾಜನ ಆಸ್ಥಾನದಲ್ಲಿ ದೊಡ್ಡ ಉದ್ಯೋಗ ಸಂಪಾದಿಸಿಕೊಳ್ಳುವಂತೆ ಮಾಡಿದನು. ಅವನು ನಾಗರಿಕ ಕುಟುಂಬದಲ್ಲಿ ಬೆಳೆದ ರಾಣಿ ಎಂಬ ಹುಡುಗಿಯನ್ನು ಮದುವೆಯಾಗಿ ಮಹಾ ನಾಗರಿಕನಾಗಿರುತ್ತ, ತಂದೆತಾಯಿಗಳ ಚಿಂತೆಯನ್ನು ಪೂರ್ತಿ ಮರೆತನು.

ಕಾಲಕ್ರಮದಲ್ಲಿ ಕೇಶವನಿಗೆ ಒಬ್ಬ ಮಗ ಹುಟ್ಟಿದ.

ಅವನು ದೊಡ್ಡವನಾಗುತ್ತಾ ಬರಲು, ರಾಣಿ ಅವನಿಗೆ ಕೂಡಾ ರಾಜಾಸ್ಥಾನದಲ್ಲಿ ಚಿಕ್ಕ ಉದ್ಯೋಗ ನೋಡಬೇಕೆಂದು ಗಂಡನೊಂದಿಗೆ ಹೇಳಿದಳು.

"ಈಗಲೇ ಉದ್ಯೋಗಕ್ಕೆ ಏನು ಅವಸರ? ಅವನು ದೊಡ್ಡ ದೊಡ್ಡ ಓದುಗಳನ್ನೆಲ್ಲ ಮುಗಿಸಲಿ" ಎಂದನು ಕೇಶವ.

"ಇನ್ನೂ ದೊಡ್ಡ ಓದು ಕಲಿತು ಬಿಟ್ಟರೆ ಅವನು ನಮ್ಮ ಮುಖ ನೋಡುತ್ತಾನೆಯೆ? ದೊಡ್ಡ ಉದ್ಯೋಗ ಸಂಪಾದಿಸಿ, ದೊಡ್ಡ ಕುಟುಂಬದವಳನ್ನು ಮದುವೆಯಾಗಿ, ಕಡೆಗೆ ನಮ್ಮ ಮುಖಕ್ಕೆ ಕೊಳ್ಳಿ ಕೂಡಾ ಇಡಲಾರ!" ಎಂದಳು ರಾಣಿ.

ಕೇಶವನಿಗೆ ಥುರ್ರನೆ ಜ್ಞಾನೋದಯವಾಯಿತು.

ಮರುದಿನವೇ ತನ್ನ ವೃದ್ಧ ತಾಯಂದಿರನ್ನು ಕರೆದುಕೊಂಡು ಬಂದು ಮನೆಯಲ್ಲಿಟ್ಟುಕೊಂಡು ಯಾವ ಕೊರತೆಯೂ ಇಲ್ಲದಂತೆ ನೋಡಿದನು.





# ಪ್ರಾಮಾಣಿಕತೆಯ ಬೆಲೆ

ಒಂದು ಊರಿನಲ್ಲಿ ದೊಡ್ಡದೊಂದು ಸರಾಫದ ಅಂಗಡಿಯಲ್ಲಿ ಚೆಲುವಯ್ಯನೆಂಬವನು ಗುಮಾಸ್ತನಾಗಿದ್ದನು. ಅವನಿಗೆ ಬರುವ ಸಂಬಳದ ಹಣವು ಅವನ ಕುಟುಂಬವು ಸುಖವಾಗಿ ನಡೆಯಲು ಸಾಲುವಷ್ಟಿದ್ದಿತು. ಅಂಗಡಿಯ ಒಡೆಯನಾದ ಸಾಹುಕಾರ್ರನು ಒಳ್ಳೆಯವನು. ಎಲ್ಲ ಕೆಲಸಗಾರರಿಗೂ ಅವನ ಮೇಲೆ ಗೌರವವಿದ್ದಿತು.

ಹೀಗಿರುವಾಗ ಚೆಲುವಯ್ಯನ ಮಗಳಿಗೆ ಮದುವೆಯ ವಯಸ್ಸು ಬಂತು. ಮದುವೆಯ ಖರ್ಚುಗಳಿಗೆ ಕಡೇಪಕ್ಷ ಸಾವಿರ ರೂಪಾಯಿ ಬೇಕಾಗಿತ್ತು. ಚೆಲುವಯ್ಯ ಅಂಗಡಿಯ ಸಾಹುಕಾರನೊಂದಿಗೆ ಸಾಲ ಕೇಳಿ ನೋಡಿದನು. ಸಾವುಕಾರನು ವ್ಯಾಪಾರದ ಕೆಲವು ಬಿಕ್ಕಟ್ಟುಗಳನ್ನು ಹೇಳಿ, ಸದ್ಯ ಸಾಲಕೊಡಲಾಗುವುದಿಲ್ಲವೆಂದು ತಿಳಿಸಿದನು.

ಒಂದು ದಿನ ತಾರಾಚಂದನೆಂಬ ಪ್ರಸಿದ್ಧ ಸಾಹುಕಾರನು ವಜ್ರಗಳ ಹಾರಗಳನ್ನು ಕೊಂಡುಕೊಳ್ಳಲು ಚೆಲುವಯ್ಯನ ಅಂಗಡಿಗೆ ಬಂದನು. ಅದು ಕೆಲಸಗಾರರು ಊಟಕ್ಕೆ ಹೋಗುವ ಸಮಯವಾಗಿತ್ತು. ಚೆಲುವಯ್ಯ ತನ್ನ ಲೆಕ್ಕಗಳ ಪುಸ್ತಕವನ್ನು ಮುಚ್ಚಿ ಅಂಗಡಿ ಮುಚ್ಚಲು ನೋಡುವಾಗಲೇ ತಾರಾಚಂದನು ಅಲ್ಲಿಗೆ ಬಂದನು.

ಚೆಲುವಯ್ಯನು ಅವನನ್ನು ಸ್ವಾಗತಿಸಿ, ಅವನಿಗೆ ಬೇಕಾದ ಎರಡು ಹಾರಗಳನ್ನು ತೆಗೆದುಕೊಟ್ಟನು. ತಾರಾಚಂದನು ಅವುಗಳ ಮೇಲೆ ತನ್ನ ಹೆಸರು ಕೆತ್ತಿಸಿ, ಚೆಲುವಯ್ಯನಿಗೆ ಬೆಲೆಯನ್ನು ಕೊಟ್ಟು ಹೊರಟುಹೋದನು.

ಚೆಲುವಯ್ಯ ತನ್ನ ಕೆಲಸ ಮುಗಿಸಿ ಅಂಗಡಿ ಮುಚ್ಚಲು ನೋಡುವಾಗ ನೆಲದ ಮೇಲೊಂದು ಚೀಲ ಕಾಣಿಸಿತು. ಅದನ್ನು ಬಿಡಿಸಿ ನೋಡಿದಾಗ, ತಾರಾಚಂದನು ಕೊಂಡುಕೊಂಡ ವಜ್ರದ ಹಾರಗಳೂ ಸ್ವಲ್ಪ ಹಣವೂ ಅದರಲ್ಲಿದ್ದುವು. ಅವುಗಳನ್ನು ನೋಡಿದಾಗ ಚೆಲುವಯ್ಯನಿಗೆ ತನ್ನ ಮಗಳ ಮದುವೆಯ ವಿಷಯ ನೆನಪಿಗೆ ಬಂತು. ಮರುಕ್ಷಣದಲ್ಲಿ ದುರ್ಬುದ್ಧಿ ತಲೆ ಎತ್ತಿತು. ಅವುಗಳನ್ನು ಮಾರಿಬಿಟ್ಟರೆ ಮಗಳ ಮದುವೆಗೆ ಬೇಕಾದ ಹಣ ಕೈಗೆ ಬಂದು ಬಿಡುತ್ತದೆ.

ಇಷ್ಟುದಿನ ಪ್ರಾಮಾಣಿಕತೆಯಿಂದ ಬದುಕಿದ ಚೆಲುವಯ್ಯನಿಗೆ ಒಮ್ಮೆಗೇ ದುರಾಲೋಚನೆ ಬಂದುದ

ಷೇಕ್ ಗಾಲಿಬ್

ರಿಂದ ಕೈ ಕಾಲಾಡಿಸಲು ಸಾಧ್ಯವಾಗಲಿಲ್ಲ. ಆದರೆ ಅಗತ್ಯತೆಯೂ ಅವಕಾಶವೂ ಕೂಡಿ ಬಂದುದರಿಂದ ಅವನು ಅದನ್ನು ತೆಗೆದುಕೊಂಡು ದೊಡ್ಡ ಪೇಟೆಯ ದಾರಿಯಾಗಿ ಹೋದನು. ಆ ವಜ್ರದಹಾರಗಳನ್ನು ಅಕ್ಕಸಾಲಿ ಮುಕ್ಕಣ್ಣಾಚಾರಿಗೆ ತಗಲಿಸಿ ಹಣ ಮಾಡಿಕೊಳ್ಳಬಹುದೆಂಬುದು ಅವನ ಉದ್ದೇಶ. ಮುಕ್ಕಣ್ಣಾಚಾರಿ ಕಣ್ಣು ಕಿಸಿದು ಕಳ್ಳನಗಗಳನ್ನು ಕೊಂಡು ಕೊಳ್ಳುವ ಸಂಗತಿ ಅವನಿಗೆ ಗೊತ್ತು.

ದೊಡ್ಡಪೇಟೆಯಲ್ಲಿ ಮರಳು ಹಾಕಿದರೆ ನೆಲಕ್ಕೆ ಬೀಳದಷ್ಟು ಜನಜಂಗುಳಿ. ಜನರನ್ನು ತಳ್ಳಿಕೊಳ್ಳುತ್ತಾ ತನ್ನ ಮನೆಯನ್ನು ಸೇರಿ, ತನ್ನ ಸೊಂಟಕ್ಕೆ ಕೈ ಹಾಕಿದನು. ಅಲ್ಲಿ ಹಾರಗಳ ಚೀಲವಿಲ್ಲ! ಚೆಲುವಯ್ಯನ ಗುಂಡಿಗೆ ಜುಂ ಎಂದಿತು. ಆ ಚೀಲದಲ್ಲೇ ತನ್ನ ತಿಂಗಳ ಸಂಬಳದ ಪೊಟ್ಟಣವೂ ಇದ್ದಿತು. ಈವರೆಗೂ ಮಾಡದೆ ಈ ಒಂದುಸಾರಿ ಹಾಳು ಕೆಲಸ ಮಾಡಿದ್ದಕ್ಕೆ ತನಗೆ ಇಷ್ಟು ದೊಡ್ಡ ಶಿಕ್ಷೆ ಬೀಳಬೇಕೇ? ಆದರೂ ಏನೋ ಕುಡಿಯಾಸೆಯಿಂದ ಬಂದ ದಾರಿಯಲ್ಲೇ ಹುಡುಕುತ್ತ ಸರಾಫದ ಅಂಗಡಿಯವರೆಗೂ ಹೋಗಿ, ಅಂಗಡಿಯಲ್ಲಾದರೂ ಹೋದ ಚೀಲ ಕಾಣಿಸುವುದೇನೋ ಎಂದು ಮೂಢತನದಿಂದ ನಂಬುತ್ತ ಅಂಗಡಿಯನ್ನು ತೆರೆದನು. ಕಳೆದು ಹೋದ ಚೀಲ ಅಂಗಡಿಯೊಳಗೆ ಹೇಗೆ ಕಂಡೀತು ?

ಅಷ್ಟರಲ್ಲಿ ಅಂಗಡಿಯ ಮುಂಬಾಗಿಲಲ್ಲಿ ಯಾರೋ ಒಳಗೆ ಬಂದರು. ಬಂದು ನಿಂತ ತಾರಾಚಂದನು ಯಮಕಿಂಕರನಂತೆ ಅವನಿಗೆ ತೋರಿತು ! ಅವನು ತನ್ನ ಹಾರಗಳನ್ನು ಅಂಗಡಿಯಲ್ಲೇ ಬಿಟ್ಟಿರುವುದನ್ನು ತಿಳಿದು, ಅವುಗಳನ್ನು ಕೇಳಲಿಕ್ಕೇ ಬಂದಿದ್ದಾನೆಂದು ನೆನೆಯುವಾಗ ಚೆಲುವಯ್ಯನ ಮೈಯೆಲ್ಲಾ ಬೆವರಿತು.

ತಾರಾಚಂದನು ವಜ್ರದ ಹಾರಗಳ ಚೀಲವನ್ನು ಎತ್ತಿ, "ಮತ್ತೇನಿಲ್ಲ. ಇವನ್ನು ಒಂದು ಸಾರಿ ಸಾಣೆ ಹಿಡಿದು ನೋಡಬೇಕು !" ಎಂದನು.



ತಾನು ಕಳೆದುಕೊಂಡ ಚೀಲ ತಾರಾಚಂದನ ಕೈಗೆ ಹೇಗೆ ಬಂತೆಂದು ತಿಳಿಯದೆ, ಚೆಲುವಯ್ಯ ದಿಗ್ಭ್ರಾಂತನಾದನು. ಅವನು ಯಂತ್ರದ ಹಾಗೆ ವಜ್ರದ ಹಾರಗಳನ್ನು ಸಾಣೆಗೆ ವರೆಸಿ ನೋಡಿ "ಅಸಲು ಹಾರಗಳೇ. ಪುನಃ ಏಕೆ ತಂದಿರಿ ?" ಎಂದು ಕೇಳಿದನು.

ತಾರಾಚಂದನು ಹೀಗೆಂದನು ; "ಅದೊಂದು ಕಥೆಯೇ ಆಯಿತು. ನಾನು ಬೀದಿಯಲ್ಲಿ ಹೋಗಿ ನೋಡಿಕೊಂಡಾಗ ಚೀಲವಿರಲಿಲ್ಲ. ಎದೆ ನಿಂತ ಹಾಗಾಯಿತನ್ನು, ಅಲ್ಪ ಸ್ವಲ್ಪವೇ ? ಇಪ್ಪತ್ತು ಸಾವಿರದ ಸರಕು ! ಹುಚ್ಚನ ಹಾಗೆ ಅಲೆದು ಮನೆಸೇರಿದೆ. ಆಗ ಮನೆ ಬಾಗಿಲಿನಲ್ಲಿ ಒಬ್ಬ ಹುಡುಗ ಕುಳಿತಿದ್ದ. ಅವನ ಕೈಯಲ್ಲಿ ನನ್ನ ಹಾರದ ಚೀಲವಿತ್ತು! ನೋಡಿದ ಕೂಡಲೇ ಪ್ರಾಣ ಬಂದ ಹಾಗಾಯಿತು. ಅದರಲ್ಲಿ ನನ್ನ ವಜ್ರದ ಹಾರಗಳಿರುವುದೆಂದು ಗುರುತು ಹೇಳಿದೆ. ಯಾವ ಪುಣ್ಯಾತ್ಮನು ಹಡೆದ ಮಗನೋ ! ಪ್ರಾಮಾಣಿಕ, ನೀತಿವಂತ ! ಆ ಚೀಲ ನನಗೆ ಕೊಟ್ಟ. ನಾನು

ಅವನಿಗೆ ಸಾವಿರ ರೂಪಾಯಿ ಬಹುಮಾನ ಕೊಟ್ಟೆ. ಮತ್ತೆ ಯಾಕೋ ಅನುಮಾನ ಬಂದು, ಅವು ನಿಜವೋ ನಕಲೋ ಎಂಬುದನ್ನು ತಿಳಿದು ಬಿಡುವಾ ಅಂತ ಸೀದಾ ಇಲ್ಲಿಗೆ ಬಂದೆ."

ತಾರಾಚಂದನ ಮಾತು ಕೇಳಿ ಚೆಲುವಯ್ಯನಿಗೆ ನಗಬೇಕೋ ಅಳಬೇಕೋ ತಿಳಿಯಲಿಲ್ಲ. ನಗಗಳು ಸೇರ ಬೇಕಾದಲ್ಲಿಗೆ ಸೇರಿವೆ. ತನ್ನ ದುರ್ಬುದ್ಧಿಗೆ ಶಿಕ್ಷೆಯಾಗಿ, ಸಂಬಳದ ಹಣವೂ ಹೋಯಿತು. ನಗಗಳೊಂದಿಗೆ ಅವುಕೂಡಾ ತಾರಾಚಂದನ ಹಣ ದೊಂದಿಗೆ ಬೆರೆತಿರಬೇಕು. ಚೆಲುವಯ್ಯ ಮತ್ತೆ ಅಂಗಡಿಯನ್ನು ಮುಚ್ಚಿ ಕಾಲೆಳೆಯುತ್ತಾ ಮನೆಗೆ ಹೋಗಿ, ಏನೂ ಮುಚ್ಚು ಮರೆ ಮಾಡದೆ ಹೆಂಡತಿಯೊಂದಿಗೆ ಎಲ್ಲವನ್ನೂ ಹೇಳಿದನು. ತಪ್ಪಿಗೆ ತಕ್ಕ ಶಿಕ್ಷೆ ಕೂಡಲೇ ಸಿಕ್ಕಿದ್ದು ನೋಡಿ ಅವಳಿಗೆ ಆಶ್ಚರ್ಯವಾಯಿತು.

ಅವಳು ಗಂಡನನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದಳಾದರೂ, ಖರ್ಚಿಗೆ ಹಣವಿಲ್ಲದೆ ತಿಂಗಳು ಕಳೆಯುವುದು ಹೇಗೆಂದು ಅವಳಿಗೆ ಗೊತ್ತಾಗಲಿಲ್ಲ. ಅಡವಿಟ್ಟಾದರೂ ಹಣ ತರಲು ಹೇಳಿ ಅವಳು ತನ್ನ ಬಳೆಗಳನ್ನು ಕಳಚುವಾಗ, ಚೆಲುವಯ್ಯನ ದೊಡ್ಡ ಮಗ ಚಂದ್ರನು ಬಂದು, ತಂದೆಯನ್ನು ನೋಡಿ ಆತುರದಿಂದ ಹೀಗೆಂದನು :

"ಅಪ್ಪಾ, ಈ ದಿನ ಏನಾಯಿತು ಗೊತ್ತಾ ? ನೀವು ಮಾಮೂಲು ಹೊತ್ತಿಗೆ ಮನೆಗೆ ಬಾರದ್ದು ನೋಡಿ, ನಿಮ್ಮನ್ನು ಊಟಕ್ಕೆ ಕರೆಯಲು ಅಮ್ಮ ಹೇಳಿದ್ದಕ್ಕೆ ನಿಮ್ಮ ಅಂಗಡಿಗೆ ಬಂದೆ. ಅಂಗಡಿ ಮುಚ್ಚಿತ್ತು. ಮೆಟ್ಟಲಿನ ಬದಿಯಲ್ಲಿ ಒಂದು ಚೀಲ ಬಿದ್ದಿತ್ತು. ಎತ್ತಿ ನೋಡಿದರೆ ಅದರೊಳಗೆ ಎರಡು ವಜ್ರದ ಹಾರಗಳೂ, ಸ್ವಲ್ಪ ಹಣವೂ ಇದ್ದುವು. ಸಿಕ್ಕಿದ ಸೊತ್ತು ಯಾರದೋ ಅವರಿಗೆ ಒಪ್ಪಿಸುವುದೇ ನ್ಯಾಯವೆಂದು ನೀವು ಹೇಳುತ್ತಾ ಇರುತ್ತೀರಲ್ಲಾ ? ಹಾರಗಳ ಮೇಲೆ ತಾರಾಚಂದ ಎಂಬ ಹೆಸರು ನೋಡಿದೆ. ಕೂಡಲೇ ಅವರ ಮನೆಗೆ ಹೋದೆ. ಸ್ವಲ್ಪ ಹೊತ್ತಿಗೆ ತಾರಾಚಂದರು ಮನೆಗೆ ಬಂದರು. ಹಾರ ಗಳ ಗುರುತು ಹೇಳಿ, ಸ್ವಲ್ಪ ನಾಣ್ಯಗಳಷ್ಟು ಹಣವೂ ಇರುವುದಾಗಿ ಹೇಳಿದರು. ಅವರು ಆ ಚೀಲ ತೆಗೆದು ಕೊಂಡು ನನಗೆ ಈ ಹಣವನ್ನು ಬಹುಮಾನ ಕೊಟ್ಟ ರಪ್ಪಾ." ತನ್ನ ದುರ್ಬುದ್ಧಿಗೆ ಶಿಕ್ಷೆ ಬಿತ್ತು ಅಂದು ಕೊಂಡರೆ ಮಗನ ಪ್ರಾಮಾಣಿಕತೆಯಿಂದ ಅದು ಕ್ಷಮಿ ಸಲ್ಪಟ್ಟಂತಾಯಿತು. ಚೆಲುವಯ್ಯನ ಸಂತೋಷಕ್ಕೆ ಮೇರೆ ಎಲ್ಲಿ? ಆ ಮೇಲೆ ಅವನು ತಾರಾಚಂದನ ಹತ್ತಿರ ಮಗಳ ಮದುವೆಗೆ ಸಾಲ ಕೇಳಿದಾಗ, ಬಡ್ಡಿಯಿಲ್ಲ ದೆಯೇ ಸಿಕ್ಕಿತು. ಚೆಲುವಯ್ಯನ ಮಗಳ ಮದುವೆ ಶುಭಸಾಂಗವಾಗಿ ನೆರವೇರಿತು.





# ನೆಲದಡಿಯಜಲ

**ಪೂ**ರ್ವಕಾಲದಲ್ಲಿ ಕಾಶೀರಾಜ್ಯವನ್ನು ಬ್ರಹ್ಮದತ್ತನು ಪಾಲಿಸಿಕೊಂಡಿದ್ದಾಗ ಬೋಧಿಸತ್ವನು ಸಾರ್ಥವಾಹಕರ ವಂಶದಲ್ಲಿ ಹುಟ್ಟಿದ್ದನು. ಅವನು ಬೆಳೆದು ದೊಡ್ಡವನಾದ ಮೇಲೆ ಐನೂರು ಗಾಡಿಗಳನ್ನಿಟ್ಟುಕೊಂಡು ದೊಡ್ಡ ರೀತಿಯಲ್ಲಿ ವರ್ತಕ ಮಾಡಲು ತೊಡಗಿದನು. ಅವನ ವರ್ತಕವು ದೇಶ ದೇಶಗಳ ನಡುವೆ ಸಾಗುತ್ತಿತ್ತು.

ಒಂದುಸಾರಿ ಅವನು ತನ್ನ ಪರಿವಾರದೊಂದಿಗೆ ವರ್ತಕದ ಸರಕುಗಳನ್ನು ಸಾಗಿಸಿಕೊಂಡು ಹೋಗುವಾಗ ಮರಳುಗಾಡಿನ ಪ್ರಾಂತವನ್ನು ಹೊಕ್ಕನು. ಆ ಮರಳುಗಾಡಿನದಾರಿ ಅರುವತ್ತು ಯೋಜನ ಉದ್ದವಿದ್ದಿತು. ಅಲ್ಲಿಯ ಮರಳು ಬಹಳ ಸಣ್ಣದು. ಮುಷ್ಟಿಯಲ್ಲಿ ಹಿಡಿದರೆ ಬೆರಳು ಸಂದಿನಲ್ಲಿ ಜಾರಿ ಹೋಗುವಂತಹುದು. ಆ ಪ್ರದೇಶವೆಲ್ಲಾ ರಾತ್ರಿ ಹೊತ್ತು ತಣ್ಣಗಿರುತ್ತದೆ. ಆದರೆ ಸೂರ್ಯೋದಯವಾದ ಮೇಲೆ ಕ್ರಮವಾಗಿ ಬಿಸಿಲೇರಿದಂತೆ ಭಗಭಗಿಸುವ ಕುಮಟಿಯಂತೆ ಬಿಸಿ ಚಿಮ್ಮುತ್ತಿದ್ದಿತು. ಆದುದರಿಂದ ಹಗಲು ಹೊತ್ತಿನಲ್ಲಿ ಆ ದಾರಿಯಲ್ಲಿ ಪ್ರಯಾಣ ಮಾಡಲು ಸಾಧ್ಯವಿಲ್ಲ.

ಹೀಗಿರುವುದರಿಂದ ಪ್ರಯಾಣಿಕರು ಮರಳುಗಾಡನ್ನು ದಾಟುವವರೆಗೂ ಅಕ್ಕಿಕಾಳು ಎಣ್ಣೆ ಸಾಂಬಾರ ಜೀನಸು ನೀರು ಮುಂತಾದುವನ್ನು ಗಾಡಿಗಳಲ್ಲಿ ತೆಗೆದುಕೊಂಡು ರಾತ್ರಿಯ ಹೊತ್ತಿನಲ್ಲಿ ಮಾತ್ರ ಪ್ರಯಾಣ ಮಾಡುವರು. ಸಮುದ್ರದ ಮೇಲೆ ಪ್ರಯಾಣ ಮಾಡುವ ನಾವಿಕರ ಹಾಗೆಯೇ ಮರಳುಗಾಡಿನ ಪ್ರಯಾಣಿಕರು ನಕ್ಷತ್ರಗಳ ಸಹಾಯದಿಂದಲೇ ತಾವು ಯಾವ ದಿಕ್ಕಿಗೆ ಹೋಗ ಬೇಕೆಂಬುದನ್ನು ತಿಳಿದುಕೊಳ್ಳುವರು. ಬೆಳಗಾಗುವ ಹೊತ್ತಿಗೆ ಅವರು ಪ್ರಯಾಣ ಮಾಡುವುದನ್ನು ನಿಲ್ಲಿಸಿ, ಗಾಡಿಗಳನ್ನು ವಲಯಾಕಾರದಲ್ಲಿ ಇರಿಸಿ, ನಡುವೆ ಮಂಟಪದ ಹಾಗೆ ಮಾಡಿ, ಅದರ ಮೇಲೆ ಚಾಂದಿನೀ ಹೊದೆಸಿ, ಬಿಸಿಲೇರುವುದರೊಳಗೆ ಅಡಿಗೆ ಊಟಗಳನ್ನು ಮುಗಿಸಿ, ಹೊತ್ತು ಮುಳುಗುವವರೆಗೂ ಮಂಟಪದ ನೆರಳಿನಲ್ಲಿ ಮಾತುಕತೆಯಾಡುತ್ತ ವಿಶ್ರಾಂತಿಯಾಗಿರುತ್ತಾರೆ. ಬೋಧಿಸತ್ವನುಕೂಡಾ ಅದೇ ರೀತಿಯಲ್ಲಿ ಪ್ರಯಾಣ ಮಾಡುತ್ತ, ಬಹಳ ಮಟ್ಟಿಗೆ ಮರಳು ಗಾಡನ್ನು ದಾಟಿದನು. ಇನ್ನು ಒಂದು ಯೋಜನ ದಾಟಿದರೆ ಮುಗಿಯಿತು. ಆ ರಾತ್ರಿಯಲ್ಲಿ ಆ




ಒಂದು ಯೋಜನವನ್ನು ದಾಟಿಬಿಡ ಬಲ್ಲೆವೆಂಬ ನಂಬುಗೆಯಲ್ಲಿ, ಸಾಯಂಕಾಲ ಹೊರಡುವ ಮೊದಲು ಬೋಧಿಸತ್ವನು ಸೇವಕರಿಂದ ನೀರು ಮತ್ತು ಕಟ್ಟಿಗೆ ಮೊದಲಾದ ಇತರ ಬೇಡದ ವಸ್ತುಗಳನ್ನು ಬಿಸಾಡಿಸಿದನು. ಹೀಗೆ ಭಾರತಗ್ಗಿಸಿಕೊಂಡರೆ ಎತ್ತುಗಳು ಬೇಗ ಬೇಗನೆ ಓಡುತ್ತ ಪ್ರಯಾಣವು ಇನ್ನಷ್ಟು ಚುರುಕಾಗಿ ಸಾಗುತ್ತಿತ್ತು.

ಎಲ್ಲದಕ್ಕಿಂತಲೂ ಮುಂದಿನ ಗಾಡಿಯಲ್ಲಿರುವವನು ದಾರಿ ನಿರ್ಣಯ ಮಾಡುವವನಾಗಿದ್ದನು. ಅವನು ರಾತ್ರಿಯಲ್ಲಿ ಎಚ್ಚರವಾಗಿದ್ದು ನಕ್ಷತ್ರಗಳ ಗಮನವನ್ನು ನೋಡುತ್ತ ಗಾಡಿ ಯಾವದಾರಿ ಹಿಡಿಯ ಬೇಕೆಂಬುದನ್ನು ತಿಳಿದು ಸಾಗುವನು. ಅವನನ್ನೆ ನಂಬಿಕೊಂಡ ಹಾಗೆ ಅವನ ಹಿಂದೆಯೇ ಎಲ್ಲಾ ಗಾಡಿಗಳೂ ಸಾಗುವುವು.

ಆದರೆ ಈ ಸಾರಿ ಅವನು ಹಗಲಿನಲ್ಲಿ ಕಡಿಮೆ ನಿದ್ರೆ ಮಾಡಿದುದರಿಂದಲೋ, ಅಥವಾ ಬಳಲಿಕೆಯಿಂದಲೋ ತೂಕಡಿಸಿ ಹಾಗೇ ನಿದ್ರಿಸಿಬಿಟ್ಟನು. ಎತ್ತುಗಳನ್ನು ನಿರ್ದೇಶಿಸಿ ಸಾಗಿಸುವವರು ಇಲ್ಲದ್ದರಿಂದ ಅವು ತಮ್ಮ ಪಾಡಿಗೆ ಬಳಸಿನಲ್ಲಿ ತಿರುಗಿ ಬಂದ ದಾರಿಯನ್ನೇ ಹಿಡಿದು ನಡೆದುವು. ಆ ಗಾಡಿಯ ಹಿಂದೆಯೇ ಉಳಿದ ಗಾಡಿಗಳೂ ತನ್ನಂತೆ ಸಾಗಿದುವು.

ಅರುಣೋದಯವಾಗುವಾಗ ಮುಂದಿನ ಗಾಡಿಯವನು ನಿದ್ದೆಯಿಂದ ಎಚ್ಚತ್ತು, ನಕ್ಷತ್ರಗಳನ್ನು ಗಮನಿಸಿ, ಗಾಡಿಗಳು ಹೋಗಬೇಕಾದ ದಿಕ್ಕಿನ ಇದಿರುದಿಕ್ಕಿಗೆ ಹೋಗುವುದನ್ನು ತಿಳಿದುಕೊಂಡು "ಗಾಡಿಗಳನ್ನು ಹಿಂದಕ್ಕೆ ತಿರುಗಿಸಿರೋ" ಎಂದು ಕೂಗಿ ಹೇಳಿದನು.

ಗಾಡಿಗಳೇನೋ ತಿರುಗಿದುವು. ಆದರೆ ಆಗ ಬಾರದಂತಹ ತಪ್ಪು ಆಗಿಯೇ ಹೋಗಿತ್ತು. ಬೆಳಗಾಗುವಷ್ಟರಲ್ಲಿ ಅವರೆಲ್ಲ ಹೊರಟ ಸ್ಥಳಕ್ಕೇ ಬಂದುಬಿಟ್ಟಿದ್ದರು. ನೀರು ಮಾತ್ರ ಅವರ ಹತ್ತಿರ ಇಲ್ಲ! ಇನ್ನು ಬಿಸಿಲೇರಿದರೆ ಅವರಿಗೇನು ಗತಿಯೋ!

ಮತ್ತೆ ಗಾಡಿಗಳನ್ನು ವಲಯಾಕಾರದಲ್ಲಿ ನಿಲ್ಲಿಸಿ, ಎಲ್ಲರೂ ನಿಸ್ಪೃಹೆಯಿಂದ ಗಾಡಿಗಳ ಬದಿಯಲ್ಲಿ ಕುಕ್ಕರಿಸಿದರು. ಬಿಸಿಲು ಏರಿದಂತೆ ನೀರಿಲ್ಲದೆ ತಮ್ಮ ಗತಿ ಏನಾಗುವುದೋ ಎಂದು ಎಲ್ಲರಿಗೂ ಭಯ ಹಿಡಿಯಿತು.

ಎಲ್ಲರ ಹಾಗೆ ತಾನು ಕೂಡಾ ಅಧೈರ್ಯವಾಗಿದ್ದರೆ ಎಲ್ಲರೂ ಸತ್ತು ಹೋಗುವುದು ನಿಜವೆಂದುಕೊಂಡು ಬೋಧಿಸತ್ವನು, ಮುಂಜಾನೆಯ ಆ ತಣ್ಣಗಿನ ವೇಳೆಯಲ್ಲಿ ಅತ್ತಿತ್ತ ತಿರುಗುತ್ತ, ನೀರಿನ ಜಾಡನ್ನು ಅತಿ ಶ್ರದ್ಧೆಯಿಂದ ಪರೀಕ್ಷಿಸುತ್ತ ಹೋಗಲು, ಒಂದು ಕಡೆಯಲ್ಲಿ ದರ್ಭೆಗಳಿಷ್ಟು ಬೆಳೆದಿರುವುದನ್ನು ನೋಡಿದನು.

ಎಲ್ಲಿಯೋ ನೀರಿಲ್ಲದಿದ್ದರೆ ಅಲ್ಲಿ ಅದು ಮೊಳೆಯುವಂತಿಲ್ಲ! ಆದುದರಿಂದ ಬೋಧಿಸತ್ವನು ಒಬ್ಬ

ಹುಡುಗನಿಂದ ಗುದ್ದಲಿ ತರಿಸಿ, ಆ ದರ್ಭೆ ಬೆಳೆದ ಸ್ಥಳದಲ್ಲಿ ಅಗೆಯಲು ಹೇಳಿದನು.

ಅರುವತ್ತು ಮೊಳ ಅಗೆದಾಗ ಖಟ್ಟೆಂದು ಗುದ್ದಲಿಗೆ ಕಲ್ಲು ತಗಲಿತು. ಅದನ್ನು ಕೇಳಿ, ಎಲ್ಲರೂ ಅಯ್ಯೋ ಎಂದು ನಿರಾಶೆ ವ್ಯಕ್ತಪಡಿಸಿದರು. ಆದರೆ ಬೋಧಿಸತ್ವನಿಗೆ ಮಾತ್ರ ಆ ಕಲ್ಲಿನ ಕೆಳಗೆ ನೀರಿದ್ದು ತೀರುತ್ತದೆಂದು ಗಟ್ಟಿ ನಂಬುಗೆಯಿತ್ತು! ಅವನು ಆ ಹೊಂಡದೊಳಗೆ ಇಳಿದು ಕಲ್ಲಿಗೆ ಕಿವಿಗೊಟ್ಟು ಆಲಿಸಿದನು. ಕಲ್ಲಿನ ಕೆಳಗೆ ಪ್ರವಹಿಸುವ ನೀರಿನ ಶಬ್ದ ಅವನಿಗೆ ಕೇಳಿಸಿತು. ನಂಬುಗೆ ಬಂತು.

ಅವನು ಹೊಂಡದೊಳಗಿನಿಂದ ಮೇಲೆ ಬಂದು, "ಅಪ್ಪಗಳಿರಾ, ನಾವೀಗ ನಿರಾಶೆಯಿಂದ ಕೈಕಾಲು ಗೆಟ್ಟು ಕಳಿತೆವೆಂದರೆ ನಿಶ್ಚಯವಾಗಿ ಸಾಯುತ್ತೇವೆ. ಒಬ್ಬನು ಹೊಂಡಕ್ಕಿಳಿದು ದೀಕ್ಷೆ ಹಿಡಿದು ಆ ಕಲ್ಲನ್ನು ಒಡೆಯಬೇಕು. ಒಬ್ಬನು ದಣಿದರೆ ಇನ್ನೊಬ್ಬ. ಕಲ್ಲಿನ ಕೆಳಗೆ ಖಂಡಿತವಾಗಿ ನೀರಿದೆ. ಅದು ಮೇಲೆ ಬಂದರೆ ನಾವೆಲ್ಲರೂ ಬದುಕುತ್ತೇವೆ! ಕಷ್ಟವೆಂದು ನೋಡಿದರೆ ಆಗಲಾರದು." ಎಂದನು.

ಬೋಧಿಸತ್ವನಿಗಿದ್ದ ವಿಶ್ವಾಸ ಬೇರೆಯಾರಿಗೂ ಇರಲಿಲ್ಲ. ಆದರೂ ಅವನ ಮಾತಿನ ಮೇಲಿನ ನಂಬುಗೆ ಮತ್ತು ಗೌರವಗಳಿಂದ ಅವನು ಹೇಳಿದ ಹಾಗೆಯೇ ಕಬ್ಬಿಣದ ಗಧಾರೆಯಿಂದ ಹೊಡೆದು ಹೊಡೆದು ಆ ಕಲ್ಲನ್ನು ಒಡೆದರು. ನೋಡ ನೋಡುತ್ತಿರಲು ಒಡಕು ಒಮ್ಮೆಗೇ ದೊಡ್ಡದಾಗಿ ತಾಳೆಯಷ್ಟುದಪ್ಪದಲ್ಲಿ ನೀರು ಮೇಲಕ್ಕೆದ್ದಿತು. ಎಲ್ಲರೂ ಆನಂದಕೋಲಾಹಲ ಮಾಡಿದರು. ದಾಹ ತೀರಿಸಿಕೊಂಡರು. ಸ್ನಾನಮಾಡಿದರು, ಹಳೆಯದಾಗಿ ಹೋದ ಗಾಡಿಯ ಚಕ್ರಗಳನ್ನು ಮುರಿದು ಸೌದೆಮಾಡಿಕೊಂಡು ಅಡಿಗೆ ಮಾಡಿದರು. ಊಟ ಮಾಡಿದರು. ಎತ್ತುಗಳಿಗೂ ಹುಲ್ಲು ನೀರು ನೀಡಿದರು. ಸಾಯಂಕಾಲವಾಗುವವರೆಗೂ ವಿಶ್ರಾಂತಿ ಪಡೆದು ರಾತ್ರಿಯಾದ ಕೂಡಲೇ ಮತ್ತೆ ಪ್ರಯಾಣ ಹೊರಟರು.

ಹೊರಡುವ ಮೊದಲು ನೀರು ಹೊರಟ ಸ್ಥಳದಲ್ಲಿ ಒಂದು ಧ್ವಜಸ್ತಂಭವನ್ನು ನೆಟ್ಟರು. ಮತ್ತೆ ಬೆಳಗಾಗುವಾಗ ನಿರಾತಂಕವಾಗಿ ಪ್ರಯಾಣ ಮುಗಿಸಿ ಗಮ್ಯಸ್ಥಾನವನ್ನು ಸೇರಿದರು.

ಅವರ ಸರಕುಗಳೆಲ್ಲ ಮೂರುಪಾಲು ಹೆಚ್ಚಿನ ಬೆಲೆಗೆ ವ್ಯಾಪಾರವಾದುದರಿಂದ ಎಲ್ಲರಿಗೂ ಬಹಳ ಉತ್ಸಾಹವೆನಿಸಿತು. ಖರ್ಚುಗಳೆಲ್ಲ ಕಳೆದು ನ್ಯಾಯವಾದ ಲಾಭವು ತುಂಬಾ ಉಳಿಯಿತು. ಹೀಗೆ ಬೋಧಿಸತ್ವನು ತನ್ನ ಸ್ವಸ್ಥಾನಕ್ಕೆ ಹಿಂದಿರುಗಿ ಬಂದು, ವ್ಯಾಪಾರದಲ್ಲಿ ಬಂದ ಹೆಚ್ಚಿನ ಲಾಭಗಳಿಂದ ದಾನಧರ್ಮ ಮಾಡುತ್ತ ಆದರ್ಶ ವರ್ತಕನೆನಿಸಿ ಸುಖವಾಗಿ ಜೀವಿಸಿದನು.





# ಸಿಕ್ಕದೇ ಹೋದ ಸಾಸಿವೆ

ಒಂದು ದಿನ ಯಶೋಧರೆ ತನ್ನ ಮಗ ರಾಹುಲನೊಂದಿಗೆ "ನಿನ್ನ ತಂದೆಯ ಹತ್ತಿರನಾಲ್ಕು ಪೆಟ್ಟಿಗೆ ತುಂಬಾ ಆಭರಣಗಳಿದ್ದುವು. ಅವೆಲ್ಲಾ ಅವರ ಮಗನಾದ ನಿನಗೇ ಸೇರಬೇಕು. ಹೋಗಿ ಅವುಗಳನ್ನು ಎಲ್ಲಿ ಇಟ್ಟಿದ್ದಾರೆಂದು ಕೇಳು" ಎಂದಳು. ಮಹಾತ್ಮನಾದ ಬುದ್ಧನೊಂದಿಗೆ ಮಾತಾಡುವ ಅವಕಾಶ ಸಿಕ್ಕಿತೆಂದುರಾಹುಲನಿಗೆ ಸಂತೋಷವಾಯಿತು.

ರಾಹುಲನು ಬುದ್ದನ ಬಳಿಗೆ ಹೋಗಿ "ಅಪ್ಪಾ, ನಿಮ್ಮ ಸೊತ್ತು ನನಗೆ ತಾನೇ ಬರಬೇಕು? ಕೊಡುವಿರಾ?" ಎಂದನು. ಬುದ್ಧನು ಕಿರುನಗುವಿನಿಂದ, "ನನ್ನವಾರಸುದಾರನಾದ ನಿನಗೆ ನನ್ನ ಉತ್ತಮ ಸಂಪತ್ತಾದ ಜ್ಞಾನವನ್ನು ಕೊಡುತ್ತೇನೆ, ತೆಗೆದುಕೊ" ಎಂದು ತನ್ನ ಪ್ರಧಾನ ಶಿಷ್ಯರಲ್ಲೊಬ್ಬನಾದ ಸಾರಿಪುತ್ತನನು ಕರೆದು ರಾಹುಲನಿಗೆ ಸನ್ಯಾಸದೀಕ್ಷೆ ಕೊಡುವಂತೆ ಹೇಳಿದನು.





ಇದನ್ನು ತಿಳಿದು ಶುದ್ಧೋದನ ರಾಜನಿಗೆ ಬಹಳ ಚಿಂತೆಯಾಯಿತು. ಅವನು ಬುದ್ಧನ ಬಳಿಗೆ ಬಂದು, "ಪ್ರಭೂ! ನೀವು ರಾಜ್ಯವನು ತಿರಸ್ಕರಿಸಿದಿರಿ. ನಿಮ್ಮ ತಮ್ಮ ಆನಂದನಿಂದಲೂ ತಿರಸ್ಕರಿಸುವಂತೆ ಮಾಡಿದಿರಿ. ಈಗ ನಿಮ್ಮ ಮಗನು ಕೂಡಾ ನಮಗಿಲ್ಲದಂತಾಯಿತು. ಇನ್ನು ನಮಗೆ ಯಾರುಗತಿ?" ಎಂದು ಕೇಳಿದನು. ಆಗ ಬುದ್ಧನು ಯಾವ ಯುವಕನಾದರೂ ತಾಯಿ ತಂದೆಯರ ಅನುಮತಿ ಇಲ್ಲದೆ ಸನ್ಯಾಸಿಯಾಗಬಾರದೆಂಬ ನಿಯಮವನ್ನು ಏರ್ಪಡಿಸಿದನು.



ಶ್ರಾವಸ್ತಿಯಲ್ಲಿ ಸುದತ್ತನೆಂಬ ಧನಿಕ ವರ್ತಕ
ನಿದ್ದನು. ಅವನು ಬುದ್ಧನಿಗೆ ಮಳೆಗಾಲದಲ್ಲಿ
ವಾಸಮಾಡಲು ಅಂದವಾದ ಜೇತವನವನ್ನು
ಕೊಡಬೇಕೆಂದುಕೊಂಡನು. ಆ ವನವು ಜೇತ
ನೆಂಬ ಕ್ಷತ್ರಿಯನದು. ಸುದತ್ತನು ಆ ವನದಲ್ಲೆಲ್ಲಾ
ಬಂಗಾರವನ್ನು ಹರಡಿ, ಅದನ್ನು ಮೂಲ್ಯವಾಗಿ
ಕೊಟ್ಟರೆ ವನವನ್ನು ಮಾರುವೆನೆಂದನು ಜೇತ.

ಸುದತ್ತನು ತನಗಿರುವುದನ್ನೆಲ್ಲಾ ಮಾರಿ
ಬಂಗಾರದ ತಗಡುಗಳನ್ನು ಕೊಂಡುಕೊಂಡನು.
ಅವೆಲ್ಲಾ ವನದ ಅರ್ಧ ಭಾಗವನ್ನು ಹರಡುವು
ದಕ್ಕಷ್ಟೇ ಸರಿಯಾಯಿತು. ಇದನ್ನು ನೋಡಿ
ಜೇತನು ಮುಗ್ಧನಾಗಿ ಉಳಿದ ವನದಲ್ಲಿ ತಾನೇ
ಬಂಗಾರವನ್ನು ಹರಡಿದನು. ಇಬ್ಬರೂ
ಕೂಡಿಯೇ ಬುದ್ಧನನ್ನು ಅಲ್ಲಿಗೆ ಸ್ವಾಗತಿಸಿದರು.





ಬುದ್ಧನು ಜೇತವನದಲ್ಲಿರುವಾಗ ಗೌತಮಿ
ಎಂಬ ಕುಲಸ್ತ್ರೀಯೊಬ್ಬಳು ಪುತ್ರವಿಯೋಗಕ್ಕೆ
ಗುರಿಯಾದಳು. ಬಂಧುಗಳು ಎಷ್ಟು ವಿಧದಲ್ಲಿ
ಹೇಳಿದರೂ ಅವಳು ತನ್ನ ಮಗನ ಶವವನ್ನು
ಬಿಟ್ಟುಕೊಡಲಿಲ್ಲ. ಅವಳ ದುಃಖಕ್ಕಂತೂ
ಪಾರವೇ ಇರಲಿಲ್ಲ.

"ನಿನ್ನ ಮಗನನ್ನು ಬುದ್ಧನು ಬದುಕಿಸುವನೋ ಏನೊ?" ಎಂದು ಕೆಲವರು ಗೌತಮಿಯೊಂದಿಗೆ ಹೇಳಿದರು. ಅವಳು ಶೀಘ್ರವಾಗಿ ಬುದ್ಧನ ಬಳಿಗೆ ಬಂದಳು. ಸಂಗತಿ ತಿಳಿದು ಬುದ್ಧನು, "ಸೋದರೀ, ನೀನು ಹೋಗಿ ಮೃತ್ಯು ಎಂದಿಗೂ ಪ್ರವೇಶಿಸದ ಮನೆಯಿಂದ ಒಂದೇ ಒಂದು ಸಾಸಿವೆಕಾಳು ತಂದುಬಿಡು. ನಿನ್ನ ಮಗ ಬದುಕುತ್ತಾನೆ" ಎಂದು ಅವಳಿಗೆ ಹೇಳಿದನು.





ತಾನು ತರುವಸಾಸಿವೆಕಾಳಿನಿಂದ ಬುದ್ಧನು ಅದ್ಭುತವೇನೋ ಮಾಡುವನೆಂದುಕೊಂಡು ಗೌತಮಿ ಮನೆಮನೆ ತಿರುಗಿದಳು. ಆದರೆ ಮೃತ್ಯು ಪ್ರವೇಶಿಸದಿದ್ದ ಮನೆ ಎಲ್ಲಿಯೂ ಸಿಗಲಿಲ್ಲ. ಅತ್ಯಂತ ಧನಿಕನೊಬ್ಬನ ಮನೆಯಲ್ಲಿ ಆ ವರ್ಷ ಮೂರು ಮರಣಗಳಾದುವಂತೆ!

ಅವಳು ಒಬ್ಬ ಸುಪ್ರಸಿದ್ಧ ವೈದ್ಯನ ಮನೆಗೆ ಹೋದಳು. ಅಂತಹ ವೈದ್ಯನ ಮನೆಗೆ ಮೃತ್ಯು ಅಡಿಯಿಡಲಾರನೆಂದುಕೊಂಡಳು. ಆದರೆ ಆ ವೈದ್ಯನ ಮಗನೂ ಮಗಳೂ ಕೂಡಾ ಮೃತ್ಯುವಿನ ಪಾಲಾದ ಸಂಗತಿ ಅವಳಿಗೆ ತಿಳಿಯಿತು.





ಬುದ್ಧನು ತನಗೆ ಮಾಡುವ ಉಪದೇಶವೇ ನೆಂಬುದು ಕ್ರಮವಾಗಿ ಅವಳಿಗೆ ತಿಳಿಯಿತು. ಅವಳು ತನ್ನ ಕುಮಾರನ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಚಿತಿಯ ಮೇಲಿಟ್ಟು "ಕಂದಾ! ಸತ್ತುಹೋದವರೆಲ್ಲಾ ನನ್ನಂತಹ ತಾಯಿಯ ಮಕ್ಕಳೇ!" ಎಂದಳು.

ಸಾಯಂಕಾಲದಲ್ಲಿ ಗೌತಮಿ ಬುದ್ಧನ ಬಳಿಗೆ ಬಂದಳು. "ಸಾಸಿವೇಕಾಳು ಸಿಕ್ಕಿತೇನು?" ಎಂದು ಬುದ್ಧನು ಕೇಳಿದನು. "ಇಲ್ಲ ದೇವಾ! ಅದರಿಂದ ನನಗೆ ನಿಮ್ಮ ದಿವ್ಯ ಉಪದೇಶ ಸಿಕ್ಕಿತು" ಎಂದಳು ಗೌತಮಿ. ಈಗ ಅವಳು ಜೀವನದ ಲಕ್ಷ್ಯವನ್ನು ತಿಳಿದುಕೊಳ್ಳುವ ಸ್ಥಿತಿ ಯಲ್ಲಿದ್ದಳು. ಬುದ್ಧನು ಅದನ್ನು ಅವಳಿಗೆ ಬೋಧಿಸಿದನು. ಅವಳು ಅವನ ಶಿಷ್ಯಳಾದಳು.





ಬುದ್ಧನು ವೈಶಾಲಿಯಲ್ಲಿರುವಾಗ ಒಂದು ದಿನ ಅವನಿಗೆ ತನ್ನ ತಂದೆ ಮರಣಶಯ್ಯೆಯಲ್ಲಿರು ವಂತೆ ತಿಳಿಯಿತು. ಅವನು ಕಪಿಲವಸ್ತುವಿಗೆ ಹೋಗಿ ಸಾಯುವ ತಂದೆಯನ್ನು ಆಶೀರ್ವದಿ ಸಿದನು. ತರುವಾಯ ಅವನು ತನ್ನ ಮತ ವನ್ನು ಪ್ರಜೆಗಳಲ್ಲಿ ಪ್ರಚಾರ ಮಾಡಲು ಹೊರಟನು.

# ಕಳ್ಳನನ್ನು ಕಳ್ಳನೇ ಕದಿಯನು!

**ಒಂ**ದು ದಿನ ರಾತ್ರಿ ಸಿಂಗನೆಂಬ ಕಳ್ಳನು ರಾಜನ ಕೋಶಾಧಿಕಾರಿಯಾದ ನಾಗವರ್ಮನ ಮನೆಯಲ್ಲಿ ಕಳವು ಮಾಡಲು ಹೊಕ್ಕನು.

ಆ ಸಮಯದಲ್ಲಿ ನಾಗವರ್ಮನು ತನ್ನ ಹೆಂಡತಿಯೊಂದಿಗೆ, "ಈ ದಿನ ರಾಜನಿಗೆ ಗೊತ್ತಾಗದ ಹಾಗೆ ನೂರು ವರಹ ಮಾತ್ರ ತರಲು ಸಾಧ್ಯವಾಯಿತು. ಇನ್ನೊಂದು ನೂರು ತಂದರೆ ಹತ್ತು ಸಾವಿರ ಭರ್ತಿಯಾಗುತ್ತದೆ" ಎಂದು ಹೇಳುತ್ತಿದ್ದನು.

ಅದನ್ನು ಕೇಳಿ ಕಳ್ಳ ಸಿಂಗ ಅಲ್ಲಿಂದ ಹೊರಟುಹೋಗಲು ನೋಡುವಾಗ, ನಾಗವರ್ಮನ ಕಣ್ಣಿಗೆ ಬಿದ್ದನು. ಅವನು ಕಳ್ಳನನ್ನು ಹಿಡಿಯಲು ನೋಡುವಾಗ, ಕಳ್ಳನು "ಬಿಡಯ್ಯಾ, ನಾನೇನೂ ಇಲ್ಲಿ ಕದೀಲಿಲ್ಲ. ಭಿಕ್ಷುಕನನ್ನು ಭಿಕ್ಷುಕ ಕದೀಲಾರ. ಕಳ್ಳನನ್ನು ಕಳ್ಳ ಕದೀಲಾರ!" ಎಂದನು.

ನಾಗವರ್ಮನು ಸಿಟ್ಟಿನಿಂದ "ಏನಂದಿ? ನಾನು ಯಾರುಗೊತ್ತೇ? ನಾನು ಕೋಶಾಧಿಕಾರಿ! ನನ್ನನ್ನು ಕಳ್ಳಾ ಅನ್ನುವಿಯಾ?" ಎಂದನು.

ಸಿಂಗನು ನಕ್ಕು, "ಎಲ್ಲಾ ಕೇಳಿದ್ದೇನೆ ಬಿಡೋ! ರಾಜನಿಗೆ ತಿಳಿಯದ ಹಾಗೆ ಪ್ರಜೆಗಳ ಸೊತ್ತು ಕದ್ದುಕೊಳ್ಳುವ ನೀನು ಕಳ್ಳನಲ್ಲದೆ ದೊರೆಯೇನು? ನಿಜ ಒಪ್ಪಿಕೊಳ್ಳದ ನೀನು ನನಗಿಂತಲೂ ಅಧಮ!" ಎಂದು ಹೇಳಿ ಹೋಗಿಬಿಟ್ಟನು.

ನಾಗವರ್ಮನು ಏನೆಂದುಕೊಂಡನೋ, ಮರು ದಿನ ಯಾರಿಗೂ ಗೊತ್ತಾಗದ ಹಾಗೆ ತಾನು ಕದ್ದುಕೊಂಡುದನ್ನೆಲ್ಲಾ ಖಜಾನೆಗೆ ಜಮೆ ಮಾಡಿ ಬಿಟ್ಟನು.





# ಅಕ್ರಮ ಸಹಾಯ

**ಹಿಂದೆ** ಸಿಳ್ಳಂಗೇರಿ ಎಂಬ ಒಂದು ಗ್ರಾಮವಿತ್ತು. ಅಲ್ಲಿ ತಿರುಗಣ್ಣಯ್ಯನೆಂಬ ದುರಾಶಾಪರನಾದ ಒಬ್ಬ ಧನಿಕನಿದ್ದನು. ಅವನಿಗೆ ಸಾಮಾನ್ಯ ಬಡ ಜನರಿಗೆ ಸಾಲ ಕೊಡುವುದಕ್ಕಿಂತಲೂ ಜೂಜಾಡುವವರಿಗೆ ಸಾಲ ಕೊಡುವುದೆಂದರೆ ಹೆಚ್ಚಿನ ಉತ್ಸಾಹ ವಿರುತ್ತಿತ್ತು. ಕಾರಣವೇನೆಂದರೆ. ಜೂಜುಗಾರರು ಸಹಜವಾಗಿಯೇ ಆಶಾವಾದಿಗಳು. ಗೆಲ್ಲುವೆವೆಂಬ ನಂಬುಗೆಯಲ್ಲಿ ಯಾವುದು ಸಿಕ್ಕಿದರೆ ಅದನ್ನು ಅಡವು ಕೊಟ್ಟು ಸಾಲ ತೆಗೆದುಕೊಳ್ಳುವರು. ಜೂಜಾಟದಲ್ಲಿ ಸೋತುಹೋಗಿ ಸಾಲದ ಹಣ ಕೊಡಲಾರದೆ ಹೋದರೆ ಸಾಲಕ್ಕಿಂತ ಹತ್ತು ಪಾಲು ಬೆಲೆಬಾಳುವ ಅಡವಿನ ವಸ್ತುಗಳು ಸಾಲ ಕೊಟ್ಟವನಿಗೇ ಸೇರಿಹೋಗುತ್ತವೆ. ಹಾಗಿಲ್ಲದೆ ಜೂಜುಗಾರನು ಆಟದಲ್ಲಿ ಗೆದ್ದುಬಿಟ್ಟರೆ ತನ್ನ ಸಾಲ ಕೊಟ್ಟು ಮುಗಿಸುವಾಗ ಧಾರಾಳವಾಗಿ ಎಷ್ಟು ಬಡ್ಡಿಯಾದರೂ ಕೊಟ್ಟುಬಿಡುತ್ತಾನೆ. ಆದುದರಿಂದ ಜೂಜುಗಾರರಿಗೆ ಸಾಲ ಕೊಟ್ಟವನು ನಷ್ಟಕ್ಕೆ ಬೀಳುವ ಮಾತೇ ಇರಲಾರದು. ಸಾಧಾರಣ ಮನುಷ್ಯರಿಗೆ ಸಾಲ ಕೊಟ್ಟರೆ ನಷ್ಟವಾಗುವ ಭಯವಿತ್ತು. ತಿರುಗಣ್ಣಯ್ಯನು ಜೂಜುಗಾರರಿಗೆ ಸಾಲ ಕೊಟ್ಟು ಯಾವ ಬಡ್ಡೀ ಲೇವಾದೇವಿಯವನೂ ಸಂಪಾದಿಸಲಾಗದಷ್ಟು ಧಂಡಿಯಾಗಿ ಸಂಪಾದಿಸುತ್ತಿದ್ದನು. ಇಂತಹ ವ್ಯಾಪಾರದಿಂದ ಕೊಂಪೆ ಮುಳುಗಿಸುವುದು ಒಳ್ಳೆಯದಲ್ಲವೆಂದು, ಊರಿನ ಹಿರಿಯರೂ, ನೆರೆಯಲ್ಲಿರುವ ಗಂಗಾಪುರದ ಹಿರೇಗೌಡನೂ ತಿರುಗಣ್ಣಯ್ಯನಿಗೆ ಎಷ್ಟೋ ಹೇಳಿ ನೋಡಿದರು. ಆದರೆ ತಿರುಗಣ್ಣಯ್ಯ ಯಾರ ಮಾತನ್ನೂ ಕಿವೀ ಮೇಲೆ ಹಾಕಿಕೊಳ್ಳಲಿಲ್ಲ.

ಹೀಗಿರಲು ಕೆಲವು ವರ್ಷಗಳಲ್ಲಿ ಊರಿನಲ್ಲಿರುವ ದೊಡ್ಡ ದೊಡ್ಡ ಜೂಜುಗಾರರೆಲ್ಲಾ ತೀರಿಹೋದರು. ಅದಕ್ಕೆ ತಕ್ಕ ಹಾಗೆ ಸರಕಾರದಿಂದ ಜೂಜಾಟದ ಮೇಲೆ ನಿಷೇಧಕೂಡಾ ಬಂದಿತು. ಈ ಬಗೆಯ ಪರಿಣಾಮಕ್ಕೆ ಊರಿನ ಜನರೆಲ್ಲಾ ಸಂತೋಷಪಟ್ಟರೂ ತಿರುಗಣ್ಣಯ್ಯನಿಗೆ ಮಾತ್ರ ಜೂಜುಗಾರರ ಮೂಲಕ ಬಹಳ ಕಾಲದಿಂದ ಬರುತ್ತಿದ್ದ ಆದಾಯ ಹೋಯಿತೆಂದು ತುಂಬಾ ಚಿಂತೆಯಾಯಿತು.

ಹೀಗಿರುವಾಗ ಒಂದು ದಿನ ತಿರುಗಣ್ಣಯ್ಯನ ಮನೆಗೆ ನೆರೆಯ ಊರಿನ ಹಿರೇ ಗೌಡನು ಗುಟ್ಟಾಗಿ ಬಂದು, ಹಿಂದೆ ಬುದ್ಧಿ ಹೇಳಿದ ತನಗೇ ಈಗ

ಕೆ. ಕೃಷ್ಣ ಅಯ್ಯರ್

ಜೂಜಾಡುವ ದುರಭ್ಯಾಸ ಅಂಟಿತೆಂದು ಹೇಳುತ್ತ, ನೂರು ರೂಪಾಯಿ ಸಾಲಕೊಡಬೇಕೆಂದು ಕೇಳಿದನು. ಈ ಹಿರಿಯ ಗೌಡನಿಗೆ ಶಿಳ್ಳಂಗೇರಿಯಲ್ಲಿ ಕೂಡಾ ಹೊಲಗದ್ದೆಗಳಿದ್ದುವು. ಇವರಿಗೆ ಸಾಲಕೊಡಲು ತೊಡಗಿದರೆ ಅವುಗಳನ್ನೆಲ್ಲಾ ತನ್ನ ವಶಪಡಿಸಿಕೊಳ್ಳ ಬಹುದೆಂಬ ದುರಾಶೆಯಿಂದ ತಿರುಗಣ್ಣಯ್ಯನು ಹಿರೇಗೌಡನಿಂದ ಸಾಲಪತ್ರ ಬರೆಯಿಸಿ ತೆಗೆದುಕೊಂಡು ನೂರು ರೂಪಾಯಿಯನ್ನು ಸಾಲಕೊಟ್ಟನು.

ಹಾಗಾದರೆ ಗುಟ್ಟಾಗಿ ಕೆಲವರು ಜೂಜಾಡುವ ರೆಂದಾಯಿತು. ಶಿಳ್ಳಂಗೇರಿಯಲ್ಲಿ ಮತ್ತೆ ಜೂಜಾಟವು ಪ್ರಾರಂಭವಾದರೆ, ಮತ್ತೆ ತನ್ನ ವೃತ್ತಿಯನ್ನು ಮುಂದು ವರಿಸಬಹುದೆಂಬ ಆಶೆಯಿಂದ ತಿರುಗಣ್ಣಯ್ಯನು, ಎಲ್ಲಿ, ಯಾರೆಲ್ಲ ಜೂಜಾಡುವರೆಂಬುದನ್ನು ತಿಳಿಯಲು ಗುಟ್ಟಾಗಿ ಹಿರೇಗೌಡನ ಹಿಂದೆಯೇ ಹೊರಟನು.

ಹಿರೇಗೌಡನು ಊರ ಹೊರಗಿನ ಒಂದು ಪಾಳು ಮನೆಯೊಳಗೆ ಪ್ರವೇಶಿಸಿದನು. ತಿರುಗಣ್ಣಯ್ಯನು ಕಿಟಕಿಯಿಂದ ಒಳಗೆ ನೋಡಿ ಆಶ್ಚರ್ಯಪಟ್ಟನು. ಒಳಗೆ ಜೂಜಾಟವು ಬಲು ಜೋರಾಗಿ ನಡೆ ಯುತ್ತಿದ್ದಿತು. ಆದರೆ ಅಲ್ಲಿ ಆಡುವವರೆಲ್ಲಾ ಹಿಂದೆ ತನ್ನ ಹತ್ತಿರ ಸಾಲಪಡೆದು, ಅದನ್ನು ತೀರಿಸಲಾಗದೆ ಕಾಲಕ್ರಮದಲ್ಲಿ ಸತ್ತು ಹೋದವರೇ! ಈ ಸಂಗತಿ ತಿಳಿಯದೆ ಹಿರೇಗೌಡರು ಆ ಮಹಾ ಜೂಜುಗಾರ ರೊಂದಿಗೆ ಆಡುತ್ತಿದ್ದಾರೆಂದರೆ ಗೆಲ್ಲುವ ಮಾತೆಲ್ಲಿ?

ಇದೂ ಒಂದು ಲೆಕ್ಕದಲ್ಲಿ ತನಗೆ ಒಳ್ಳೆಯದೇ ಎಂದುಕೊಂಡು ತಿರುಗಣ್ಣಯ್ಯನು ಸಂತೋಷದಿಂದ ಮನೆಗೆ ಹಿಂದಿರುಗಿದನು. ಅವನು ಅಂದು ಕೊಂಡಂತೆಯೇ ಹಿರೇಗೌಡನು ಮಾರಣೇ ದಿನ ರಾತ್ರಿ ಮತ್ತೆ ತಿರುಗಣ್ಣಯ್ಯನ ಮನೆಗೆ ಬಂದು, ಪತ್ರಬರೆದುಕೊಟ್ಟು ಮತ್ತೆ ಸ್ವಲ್ಪ ಹಣ ಸಾಲ ತೆಗೆದುಕೊಂಡು ಹೋದನು. ಆಮೇಲೆ ಅವನು ದಿನಾ ರಾತ್ರಿ ತಿರುಗಣ್ಣಯ್ಯನ ಮನೆಗೆ ಬರುವುದೂ, ಪತ್ರಬರೆದು ನೂರೋ ಇನ್ನೂರೋ ಪಡೆದುಕೊಂಡು ಹೋಗುವುದೂ ನಡೆದೇ ನಡೆಯಿತು. ಇನ್ನು ಬೇಗ ದಲ್ಲೇ ಹಿರೇಗೌಡನ ಸೊತ್ತೆಲ್ಲಾ ತನ್ನದಾಗುವುದೆಂದು



ತಿರುಗಣ್ಣಯ್ಯ ಸಂತೋಷ ಪಡುತ್ತಲೇ ಇದ್ದನು. ಈ ರೀತಿಯಾಗಿ ಇಪ್ಪತ್ತು ದಿನಗಳು ಕಳೆದ ಮೇಲೆ ತಿರುಗಣ್ಣಯ್ಯನು ಹಿರೇಗೌಡನೊಂದಿಗೆ, "ಅಯ್ಯಾ, ನಿಮ್ಮ ಸಾಲ ತುಂಬಾ ಬೆಳೆದು ಹೋಯಿತು. ಈ ಊರಲ್ಲಿರುವ ನಿಮ್ಮ ಹೊಲ ಗದ್ದೆಗಳನ್ನು ಅಡವು ಹಾಕಿ ಹಣ ತೆಗೆದುಕೊಂಡು ಹೋದರೆ ಒಳ್ಳೇದೆಂದು ಕಾಣುತ್ತದೆ." ಎಂದನು.

"ಅಡವುಗಿಡವು ಯಾಕೆ? ಇಲ್ಲಿರುವ ಎಲ್ಲಾ ಆಸ್ತಿಯನ್ನೂ ನಿಮಗೇ ವಿಕ್ರಯಿಸಿಬಿಡುತ್ತೇನೆ. ಪತ್ರವನ್ನೆಲ್ಲಾಬರೆಸಿ, ಸಾಕ್ಷಿಗಳನ್ನು ಕರೆದುಕೊಂಡು ನಮ್ಮ ಊರಿಗೆ ಬಂದುಬಿಡಿ. ಈಗ ಅವಸರಕ್ಕೆ ಒಂದು ಸಾವಿರ ಬೇಕು" ಎಂದನು ಹಿರೇಗೌಡ.

ತಿರುಗಣ್ಣಯ್ಯ ಬಹಳ ಸಂತೃಪ್ತಿಯಿಂದ ಹಿರೇಗೌಡನಿಗೆ ಒಂದು ಸಾವಿರ ರೂಪಾಯಿ ಕೊಟ್ಟು ಕಳುಹಿಸಿದನು. ಆಮೇಲೆ ಬೇಗದಲ್ಲೇ ಪತ್ರ ಬರೆಯುವವರನ್ನೂ, ಸಾಕ್ಷಿಗಳನ್ನೂ ಕರೆದುಕೊಂಡು ಗಂಗಾಪುರಕ್ಕೆ ಹೋದನು. ಅಲ್ಲಿಗೆ ಹೋಗಿ ವಿಚಾರಿಸಿದಾಗ ಹಿರೇಗೌಡ ತೀರಿಹೋಗಿ ಒಂದು ತಿಂಗಳ ಮೇಲೆ ಆಯಿತೆಂದು ಗೊತ್ತಾಯಿತು. ತನ್ನ ಮರಣದ ಸುದ್ದಿ ಹೊರಗಿನ ಊರುಗಳಿಗೆ ತಿಳಿಯಲೇ ಬಾರದೆಂದು ಸಾಯುವ ಮೊದಲು ಕಟ್ಟಪ್ಪಣೆ ಮಾಡಿದ್ದನಂತೆ! ತಿರುಗಣ್ಣಯ್ಯನು ನಡೆಪೆಣದಂತೆ ಮನೆಗೆ ಬಂದು ಹಿರೇಗೌಡನು ಬರೆದುಕೊಟ್ಟ ಕಾಗದವನ್ನು ನೋಡಿದನು. ಅದು ಒಂದಕ್ಷರವೂ ಇಲ್ಲದ ಖಾಲೀ ಕಾಗದವಾಗಿತ್ತು!

ಆ ದಿನ ರಾತ್ರಿ ಹಿರೇಗೌಡನು ಮತ್ತೆ ಸಾಲ ಕೇಳಲು ಬಂದನು. ಅವನನ್ನು ನೋಡಿ ತಿರುಗಣ್ಣಯ್ಯನು ಗದಗದನಡುಗುತ್ತ, "ಅಯ್ಯಾ! ಹಿರೇಗೌಡರೇ! ನನ್ನನ್ನು ಇಷ್ಟಕ್ಕೇ ಬಿಡಿರಯ್ಯಾ!" ಎಂದು ನರಳುವ ಹಾಗೆ ಕೂಗಿದನು.

"ಅದು ಹೇಗೆ ಸಾಧ್ಯವಾದೀತು? ನೀನು ಕೊಟ್ಟ ಹಣದಿಂದ ನನ್ನ ಜೂಜಾಟದ ಮಿತ್ರರ ಕುಟುಂಬದವರಿಗೆ ಉಂಟಾದ ನಷ್ಟ ಇನ್ನೂ ತುಂಬಲಿಲ್ಲ. ನೀನು ಅನೇಕ ಮನೆಗಳನ್ನು ಹಾಳು ಮಾಡಿದವನು. ನಾನೀಗ ಒಂದೊಂದು ಮನೆಯನ್ನೇ ನಿಲ್ಲಿಸುತ್ತಾಬರುತ್ತಿದ್ದೇನೆ. ಎಷ್ಟು ಮನೆಗಳು ನಿನ್ನಿಂದ ಹಾಳಾಗಿವೆಯೋ ಅವೆಲ್ಲ ಮತ್ತೆ ಎದ್ದು ನಿಲ್ಲುವವರೆಗೂ ನಾನು ನಿನ್ನನ್ನು ಬಿಡಲಾರೆ!" ಎಂದನು ದೆವ್ವವಾದ ಹಿರೇಗೌಡ.

"ಅಂಥವರಿಗೆಲ್ಲಾ ನಾನೇ ನೋಡಿ ಹಂಚಿಕೊಡುತ್ತೇನೆ! ನನ್ನ ಮಗನಾಣೇ! ನೀವು ಮಾತ್ರ ಬರಬೇಡಿ ದೆವ್ವಾಗೌಡ್ರೇ!" ಎಂದು ತಿರುಗಣ್ಣಯ್ಯನು ಬೆವರಿ ಮುದ್ದೆಯಾಗಿ ದೆವ್ವದಮುಂದೆ ಸಾಷ್ಟಾಂಗ ಬಿದ್ದನು. ತಲೆಯೆತ್ತಿ ನೋಡಿದಾಗ ಹಿರೇಗೌಡ ದೆವ್ವ ಅದೃಶ್ಯವಾಗಿ ಹೋಗಿತ್ತು.



# ನಿಜವಾದ ಮಗ

ಗುರುವಯ್ಯನಿಗೆ ಮಕ್ಕಳಿರಲಿಲ್ಲ. ಅವನ ಹೆಂಡತಿ ಆಕಸ್ಮಿಕವಾಗಿ ತೀರಿಹೋದಳು. ಮತ್ತೆ ಮದುವೆಯಾಗಲು ಇಷ್ಟವಿಲ್ಲದೆ, ಒಬ್ಬಂಟಿಗನಾಗಿರಲೂ ಸಾಧ್ಯವಾಗದೆ, ದಿಕ್ಕಿಲ್ಲದ ಶೀನಪ್ಪನನ್ನು ಕರೆದುಕೊಂಡು ತನ್ನ ಮಗನ ಹಾಗೆಯೇ ನೋಡಿಕೊಳ್ಳತೊಡಗಿದನು.

ಈ ಸಮಾಚಾರ ದೂರದ ಗ್ರಾಮದಲ್ಲಿದ್ದ ಗುರುವಯ್ಯನ ಬಾಲ್ಯಸ್ನೇಹಿತನಾದ ರಾಮಪ್ಪನಿಗೆ ಗೊತ್ತಾಯಿತು. ಅವನು ಗೆಳೆಯನನ್ನು ನೋಡಲು ಬಂದು, "ಅಲ್ಲ ಗುರುವಯ್ಯಾ, ಮತ್ತೆ ಮದುವೆಯಾಗುವುದನ್ನು ಬಿಟ್ಟು, ನೀನು ಯಾವನೋ ಅನಾಥನನ್ನು ಬೆಳೆಸುವೆಯಲ್ಲಾ? ಎಷ್ಟಾದರೂ ಅವನು ಸ್ವಂತ ಮಗನ ಹಾಗೆ ಆಗಬಲ್ಲನೇ?" ಎಂದನು.

"ಇರಲಿಬಿಡು" ಎಂದು ಗುರುವಯ್ಯನು ಹೆಚ್ಚು ಚರ್ಚೆಗೆ ಇಳಿಯದೆ ಅವನನ್ನು ಕಳುಹಿಸಿದನು.

ಕೆಲವು ವರ್ಷಗಳ ಮೇಲೆ ರಾಮಪ್ಪನು ಮತ್ತೊಮ್ಮೆ ಗುರುವಯ್ಯನನ್ನು ನೋಡಲು ಬಂದು, "ನನ್ನ ಅವಸ್ಥೆ ಏನು ಹೇಳಲಿ? ನನ್ನ ಮಗ ನನ್ನ ಹತ್ತಿರ ಜಗಳ ಮಾಡಿ ನನ್ನನ್ನು ಬಿಟ್ಟು ಯಾವಳೊಂದಿಗೋ ಬೇರೆ ಮನೆ ಮಾಡಿಕೊಂಡ. ನಿನ್ನ ಗತಿ ಹೇಗಿದೆಯೋ? ನಿನ್ನ ಸಾಕುಮಗ ಶೀನಪ್ಪ ನಿನಗೆಷ್ಟು ದ್ರೋಹ ಮಾಡಿದನೋ ಏನೊ?" ಎಂದನು.

"ಅವನು ನನ್ನನ್ನು ತಂದೆಗಿಂತ ಹೆಚ್ಚಾಗಿಯೇ ನೋಡಿದ. ನಾನು ಹಾಸಿಗೆ ಹಿಡಿದಾಗ ರಾತ್ರೀಹಗಲೂ ಸೇವೆ ಮಾಡಿದ. ನನ್ನ ತಲೆಭಾಗಕ್ಕೆ ಬೆಂಕಿ ಇಟ್ಟ. ಈಗ ನನ್ನ ಅಸ್ಥಿಗಳನ್ನು ಗಂಗೆಯಲ್ಲಿ ಬೆರೆಸಲು ಕಾಶಿಗೆ ಹೋಗಿದ್ದಾನೆ!" ಎಂದು ಗುರುವಯ್ಯ ಗಾಳಿಯಲ್ಲಿ ಹಾರಿಹೋದನು!





# ದೂರದೃಷ್ಟಿ

ಒಂದು ಊರಿನಲ್ಲಿ ಶಿವರಾಮನೂ, ಭೂಪತಿಯೂ ಸ್ನೇಹಿತರಾಗಿದ್ದರು. ಇಬ್ಬರದೂ ವ್ಯಾಪಾರದ ವೃತ್ತಿಯೇ ಆದರೂ ಭೂಪತಿಯ ವಾಪಾರವೇ ದೊಡ್ಡದಾಗಿತ್ತು. ಅವನ ವ್ಯಾಪಾರದೊಂದಿಗೆ ಹೋಲಿಸಿದರೆ ಶಿವರಾಮನದು ಬಹಳ ಚಿಕ್ಕ ವ್ಯಾಪಾರವೇ. ಆದರೂ ಕೂಡ ಇಬ್ಬರೂ ಅವ ರವರ ಮಟ್ಟದಲ್ಲಿ ಲಾಭಗಳಿಸುತ್ತಲೇ ಇದ್ದರು. ಇಬ್ಬರ ಮಕ್ಕಳೂ ಪಟ್ಟಣದಲ್ಲಿದ್ದು ದೊಡ್ಡ ವಿದ್ಯೆ ಗಳನ್ನೇ ಕಲಿಯುತ್ತಿದ್ದರು.

ಒಂದುಸಾರಿ ಶಿವರಾಮನು ಭೂಪತಿಯೊಂದಿಗೆ, "ನೋಡಯ್ಯಾ, ನಮ್ಮ ಕಾಲವೆಲ್ಲಾ ಈ ವ್ಯವಹಾರ ಗಳ ಸುಳಿಯಲ್ಲಿಯೂ, ಸಂಸಾರ ತಾಪತ್ರಯ ಗಳಲ್ಲಿಯೂ ಕಳೆದು ಹೋಗುತ್ತಾ ಇದೆ. ಮನಸ್ಸಿ ಗಿಷ್ಟು ಶಾಂತಿಯೂ ವಿಶ್ರಾಂತಿಯೂ ಆಗುವ ಹಾಗೆ ಸ್ವಲ್ಪ ಕಾಲ ನಾವು ತೀರ್ಥಯಾತ್ರೆಗೆ ಹೊರಟು ಪುಣ್ಯಸ್ಥಳಗಳ ದರ್ಶನ ಮಾಡಿ ಬರು ವುದು ಒಳ್ಳೇದಲ್ಲವೇ? ಕೈಕಾಲು ಗಟ್ಟಿಯಿರುವಾಗ ಮಾಡದಿದ್ದರೆ ಮುಂದೆ ಮಾಡಲು ಸಾಧ್ಯವೆ?" ಎಂದು ಮಾತಾಡಿದನು.

ಭೂಪತಿ ಸಂಶಯಪಡುತ್ತ, "ಅದಕ್ಕೆ ಬಹಳ ಹಣ ಬೇಕಾಗುತ್ತದಲ್ಲಾ?" ಎಂದನು.

"ಇಂತಹ ವಿಷಯಗಳಲ್ಲಿ ಹಣದ ಖರ್ಚು ನೋಡಿ ಹಿಂದಡಿ ಇಡುತ್ತಾರೆಯೇ? ನಮಗಿಬ್ಬರಿಗೂ ಸಾಕಾಗುವಷ್ಟು ಹಣ ನನ್ನ ಹತ್ತಿರ ಇದೆ ಬಿಡು. ನಿನಗೆ ಸೌಕರ್ಯವಾದಾಗ ನನಗೆ ಕೊಟ್ಟರೆ ಸಾಕು. ಏನೂ ಅವಸರವಿಲ್ಲ. ಹೆಚ್ಚು ಯೋಚನೆ ಮಾಡದೆ ಹೊರಟುಬಿಡಯ್ಯ" ಎಂದನು ಶಿವರಾಮ. ಭೂಪತಿ ಗಿಂತ ತಾನೇ ಹೆಚ್ಚು ಸಂಪನ್ನನಾಗಿರುವೆನೆಂದು ಸೂಚಿ ಸುವ ಹಾಗಿತ್ತು ಅವನ ಮಾತು.

ಶಿವರಾಮನ ಹಣದಿಂದಲೇ ಇಬ್ಬರೂ ಯಾತ್ರೆಗೆ ಹೊರಟು, ನಿರಾತಂಕವಾಗಿ ತೀರ್ಥಯಾತ್ರೆ ಮುಗಿಸಿ ಹಿಂದಿರುಗಿ ಬಂದರು. ಆ ಸಮಯಕ್ಕೆ ಊರಿನವರು ಒಂದು ಶಿವಾಲಯ ಕಟ್ಟಿಸಲು ತೀರ್ಮಾನಿಸಿ, ಚಂದಾ ವಸೂಲು ಮಾಡುತ್ತ, ಭೂಪತಿಯ ಮನೆಗೂ ಬಂದರು. ಆಗ ಶಿವರಾಮನೂ ಅಲ್ಲಿಯೇ ಭೂಪತಿ ಯೊಂದಿಗೆ ಏನೋ ಮಾತಾಡುತ್ತ ಕುಳಿತಿದ್ದನು.

ಭೂಪತಿ ಚಂದಾ ವಸೂಲು ಮಾಡುವವರನ್ನು ನೋಡಿ, "ಪ್ರಸ್ತುತ ನನ್ನ ಹತ್ತಿರ ಹಣವಿಲ್ಲ. ಎಲ್ಲರ

ಎನ್. ನಾಗಮಣಿ

ಹತ್ತಿರ ವಸೂಲು ಮಾಡಿಕೊಂಡು ಆ ಮೇಲೆ ಇಲ್ಲಿಗೆ ಬನ್ನಿರಿ" ಎಂದನು.

"ನಿಮ್ಮ ಚಂದಾ ಕೊಡುವಿರಾ?" ಎಂದು ಅವರು ಶಿವರಾಮುನನ್ನು ಕೇಳಿದರು.

"ನನಗೆ ಯಾತ್ರೆಗೆ ಹೊರಡುವ ಮೊದಲೇ ಈ ಸಂಗತಿ ಗೊತ್ತಿತ್ತು. ನೀವು ಕೇಳಲು ಬಂದಾಗ ಕೊಡುವಂತೆ ಹೇಳಿ ನನ್ನ ಹೆಂಡತಿಯ ಹತ್ತಿರ ನೂರು ರೂಪಾಯಿ ಕೊಟ್ಟಿದ್ದೇನೆ. ಮನೆಗೆ ಹೋಗಿ ತೆಗೆದುಕೊಳ್ಳಿ" ಎಂದು ಶಿವರಾಮುನು ಅವರೊಂದಿಗೆ ಹೇಳಿದನು. ಆ ಮಾತು ಕೇಳಿ ಭೂಪತಿಯ ಮುಖ ಸ್ವಲ್ಪ ಬಾಡಿತು. ಮನಸ್ಸಿಗೆ ಆಶ್ಚರ್ಯ.

ಆ ಮೇಲೆ ಒಂದು ದಿನ ಶಿವರಾಮುನು ಕೆಲಸದ ಮೇಲೆ ಪಟ್ಟಣಕ್ಕೆ ಹೋಗಿ, ತನ್ನ ಮಕ್ಕಳ ಯೋಗ ಕ್ಷೇಮ ವಿಚಾರಿಸುವಾಗ, ಅಲ್ಲಿಯೇ ಇರುವ ಭೂಪತಿಯ ಮಕ್ಕಳ ಕುಶಲವನ್ನು ವಿಚಾರಿಸಿದನು.

ಆಗ ಭೂಪತಿಯ ಹಿರಿಯ ಮಗನು ಶಿವರಾಮುನೊಂದಿಗೆ, "ನಮ್ಮ ಕಷ್ಟ ಏನಂತ ಹೇಳಲಿ ಅಯ್ಯಾ! ಏನು ಕಾರಣವೋ ತಿಳಿಯದು. ಈಗ ಎರಡು ತಿಂಗಳಿಂದ ನಮ್ಮ ಅಪ್ಪ ಹಣ ಕಳುಹಿಸಲೇ ಇಲ್ಲ. ಶಾಲೆಯಲ್ಲಿ ಸಂಬಳದ ಹಣ ಕಟ್ಟದಿದ್ದರೆ ಹೆಸರು ಹೊಡೆದು ಹಾಕುತ್ತಾರಂತೆ. ನೀವೇ ನಮ್ಮ ಅಪ್ಪನಿಗೆ ಸ್ವಲ್ಪ ನಾಟುವ ಹಾಗೆ ಹೇಳಬೇಕು" ಎಂದನು.

ಆ ಮಾತು ಕೇಳಿ ಶಿವರಾಮುನು ತುಂಬ ನೊಂದುಕೊಂಡು, ತನ್ನ ಹತ್ತಿರವಿದ್ದ ಹಣದಲ್ಲಿ ದಾರೀಖರ್ಚಿನ ಬಗ್ಗೆ ಬೇಕಷ್ಟೇ ಇಟ್ಟುಕೊಂಡು, ಉಳಿದುದನ್ನೆಲ್ಲ ಭೂಪತಿಯ ಮಗನಿಗೆ ಕೊಟ್ಟು, "ಸದ್ಯ ಈ ಹಣ ಉಪಯೋಗಿಸಿಕೋ. ನಾನು ಮನೆಗೆ ಹೋದ ಕೂಡಲೇ ನಿಮ್ಮ ಅಪ್ಪನನ್ನು ನೋಡಿ ಎಲ್ಲಾ ಸಂಗತಿ ಹೇಳುತ್ತೇನೆ." ಎಂದನು.

ಅದರಂತೆ ಶಿವರಾಮುನು, ಹಿಂದಿರುಗಿ ಬಂದ ಕೂಡಲೇ ಭೂಪತಿಯ ಬಳಿಗೆ ಹೋಗಿ, ನಸುಗೋಪದಿಂದ, "ಏನಯ್ಯ ನೀನು? ಇಷ್ಟು ದೊಡ್ಡ ವ್ಯಾಪಾರ ಮಾಡುವವನು! ಮಕ್ಕಳಿಗೆ ಸಮಯಕ್ಕೆ ಹಣ ಕಳುಹಿಸದೆ ಹೋದರೆ, ಅವರ ಓದು ಬರೆಹ



ಹೇಗೆ ಮುಂದೆ ಸಾಗುತ್ತದೆಂದುಕೊಳ್ಳುವೆ ? ಏಕೆ ಇಷ್ಟು ಉದಾಸೀನತೆ ? " ಎಂದು ಜರೆದನು.

ಭೂಪತಿ ನಿಸ್ಸಹಾಯಕನಂತೆ, "ನನ್ನನ್ನು ಏನು ಮಾಡಬೇಕೆನ್ನುವೆ ಹೇಳು ? ದೊಡ್ಡ ವ್ಯಾಪಾರ ಮಾಡುವೆನೆಂಬ ಮಾತು ನಿಜವೇ ಆದರೂ, ಅಗತ್ಯ ವಿರುವಾಗ ಕೈಯಲ್ಲಿ ಒಂದು ಪೈಸಾ ಇರುವುದಿಲ್ಲ. ಮಕ್ಕಳಿಗೆ ನಾಳೆ ಹಣ ಕಳುಹಿಸಬೇಕೆಂದು ತಯಾರು ಮಾಡಿದ್ದೇನೆ. ಅದಲ್ಲ ಶಿವರಾಮಾ ! ನನಗೆ ಬಹಳ ಕಾಲದಿಂದ ಒಂದು ಅನುಮಾನವಿದೆ. ದೊಡ್ಡದೊಡ್ಡ ವ್ಯಾಪಾರ ಮಾಡುತ್ತಿದ್ದರೂ ನನ್ನ ಕೈಯ್ಯಲ್ಲಿ ಚಿಕ್ಕಾಸೂ ಇರುವುದಿಲ್ಲ! ನೀನು ಸಣ್ಣ ವ್ಯಾಪಾರ ಮಾಡುತ್ತಿದ್ದರೂ ಯಾವಾಗಲೂ ನಿನ್ನ ಕೈಯಲ್ಲಿ ಹಣ ಇದ್ದೇ ಇರುತ್ತದೆ. ಇದು ಹೇಗೆ ಸಾಧ್ಯವೋ ಅಂತ ತಿಳಿಯದಿದ್ದೇನೆ. ನಿನ್ನ ಹತ್ತಿರ ಏನೋ ಮೂಲಧನವಾದರೂ ಇರಬೇಕು. ಇಲ್ಲವೇ ನಿನಗೆ ನಿಧಿಗಿಧಿ ಏನಾದರೂ ಸಿಕ್ಕಿರಬೇಕು. ಈ ರಹಸ್ಯ ಏನೆಂಬುದನ್ನು ಸ್ವಲ್ಪ ಹೇಳಿ ಬಿಡ ಯಯಾ ? " ಎಂದು ಅವನ ಕೈ ಹಿಡಿದನು.

ಶಿವರಾಮನು ನಗುತ್ತ, "ನನ್ನ ಮನೆಗೆ ಬಾರಯ್ಯ. ನನ್ನ ರಹಸ್ಯ ತೋರಿಸುತ್ತೇನೆ " ಎಂದನು.

ಅವನು ಭೂಪತಿಯನ್ನು ತನ್ನ ಮನೆಗೆ ಕರೆದು ಕೊಂಡು ಹೋಗಿ, ದೇವರ ಕೋಣೆಯಲ್ಲಿದ್ದ ನಾಲ್ಕೈದು ಹುಂಡೀ ಡಬ್ಬಗಳನ್ನು ತೋರಿಸಿದನು.

" ಏನಿದು ? " ಎಂದು ಕೇಳಿದನು ಭೂಪತಿ.

" ಇವೇ ನನ್ನ ಮೂಲಧನ, ನಿಧಿ ಎಲ್ಲವೂ. ನನ್ನ ರಹಸ್ಯವೆಂದರೆ ಮಿತವ್ಯಯವೇ. ನಾನೂ ನನ್ನ ಹೆಂಡತಿಯೂ ಕೈಯಲ್ಲಿರುವ ಹಣವನ್ನು ಅಗತ್ಯ ವಾದುದಕ್ಕಷ್ಟೇ ಖರ್ಚು ಮಾಡುತ್ತ, ಪ್ರತಿ ದಿನವೂ ಉಳಿದ ಹಣವನ್ನು ಈ ಹುಂಡಿಗಳಲ್ಲಿ ಹಾಕುತ್ತೇವೆ. ಈ ಹುಂಡಿಗಳಲ್ಲಿ ಒಂದನೇದು ದೈವಕಾರ್ಯಗಳಿಗೆ. ಎರಡನೆಯದು ಮಕ್ಕಳ ಓದುವಿಕೆಗೆ. ಮೂರನೆಯದು ಹಬ್ಬ ಹಾಡಿಗಳ ಖರ್ಚಿಗೆ, ನಾಲ್ಕನೆಯದು ಅಲ್ಲಿ ಇಲ್ಲಿ ನಡೆಯುವ ಮದುವೆ, ಮುಂಜಿಗಳ ಕಾಣಿಕೆಗಳಿಗೆ ಹೀಗಿವೆ. ನಾವು ತೀರ್ಥಯಾತ್ರೆಗೆ ಹೊರಡುವಾಗ ದೈವಕಾರ್ಯಗಳ ಹುಂಡಿಯಲ್ಲಿ ತುಂಬಾ ಹಣ ಸೇರಿತ್ತು. ಅದರಿಂದ ನಾವಿಬ್ಬರೂ ಸುಖವಾಗಿ ಪುಣ್ಯ ಕ್ಷೇತ್ರಗಳನ್ನು ತಿರುಗಿ ಬಂದೆವು." ಎನ್ನುತ್ತ ಶಿವರಾಮನು ತನ್ನ ಮಿತವ್ಯಯದ ಉಳಿತಾಯವನ್ನು ಕುರಿತು ವಿವರಿಸಿ ಹೇಳಿದನು.

ಅದನ್ನು ಕೇಳಿ ಭೂಪತಿ, "ಇಷ್ಟು ಕಾಲ ನನಗೆ ಈ ಪದ್ಧತಿ ಏಕೆ ಹೇಳಲಿಲ್ಲ ? ಹೇಳಿದ್ದರೆ ಹೀಗೆಯೇ ಮಾಡಿ ಬೇಕಾದಾಗ ಪರದಾಡುವ ಕಷ್ಟಕ್ಕೆ ಬೀಳು ತ್ತಿದ್ದಿಲ್ಲವಷ್ಟೆ? ಈಗಾದರೂ ಹೇಳಿದೆಯಲ್ಲ ಪುಣ್ಯಾತ್ಮ! ಇನ್ನು ನಿನ್ನ ಹಾಗೇ ನಾನೂ ಮಾಡುತ್ತೇನೆ" ಎಂದನು.



# ಮೆಚ್ಚಿದ ವರ

ಒಬ್ಬ ಧನಿಕನ ಮಗಳಿಗೆ ಮದುವೆಯ ವಯಸು ಬಂದಿತು. ಸೋದರಿಕೆಯಲ್ಲೇ ಅವಳ ಅತ್ತೆಯ ಕುಮಾರರು ಮೂವರಿದ್ದರು.

ಒಬ್ಬನು ರಾಜನ ಸೈನ್ಯಶಾಖೆಯ ದೊಡ್ಡ ಉದ್ಯೋಗಸ್ಥ. ಇನ್ನೊಬ್ಬನು ದೊಡ್ಡ ವರ್ತಕನಾಗಿದ್ದ. ಮೂರನೆಯವನು ಕವಿಯೂ, ಚಿತ್ರಕಾರನೂ ಆದ ಕಲಾವಿದ.

"ಈ ಮೂವರಲ್ಲಿ ನಿನಗೆ ಯಾರ ಮೇಲೆ ಇಷ್ಟವೋ ಅವನಿಗೇ ನಿನ್ನನ್ನು ಕೊಟ್ಟು ಮದುವೆ ಮಾಡುತ್ತೇನೆ" ಎಂದನು ತಂದೆ.

ಮಗಳು ಸ್ವಲ್ಪವೂ ಯೋಚನೆ ಮಾಡದೆ ಕೂಡಲೇ, "ನಾನು ಕಲಾವಿದನನ್ನೇ ಮದುವೆಯಾಗುತ್ತೇನೆ ಅಪ್ಪಾ" ಎಂದಳು ಮೋರೆ ತಗ್ಗಿಸಿಕೊಂಡು.

"ಅವನಲ್ಲಿ ಅಂಥ ವಿಶೇಷವೇನಿದೆ? ರಾಜನ ಕೈಕೆಳಗೆ ಪದವಿಯಲ್ಲಿರುವವನನ್ನೂ, ಪುಷ್ಕಳವಾಗಿ ಹಣ ಸಂಪಾದಿಸುವವನನ್ನೂ ಬಿಟ್ಟು ಕಲಾವಿದನನ್ನೇ ಅಂತ ಕೂಡಲೇ ಹೇಳಿದೆಯಲ್ಲಾ? ಯೋಚನೆ ಮಾಡಿ ಹೇಳಮ್ಮಾ" ಎಂದನು ತಂದೆ.

"ಅಧಿಕಾರ ಪದವಿಗಳು ಶರೀರದಲ್ಲಿ ಶಕ್ತಿ ಇರುವವರೆಗಾಯಿತು. ವ್ಯಾಪಾರದಲ್ಲಿ ಲಕ್ಷ ಸಂಪಾದಿಸಿದರೂ ಲೆಕ್ಕ ತಪ್ಪಿದರೆ ಕ್ಷಣಮಾತ್ರದಲ್ಲಿ ಭಿಕ್ಷುಕನಾಗಬಹುದು. ಕಲಾವಿದನ ಸ್ಥಾನ ಹಾಗಲ್ಲ. ಅನುಭವದಿಂದ ಹೆಚ್ಚುವುದೇ ಹೊರತು ತಗ್ಗದು. ಬದುಕಿರುವವರೆಗೂ ಉಚ್ಚದಶೆಯಲ್ಲಿಯೇ ಇರುತ್ತಾನೆ" ಎಂದಳು ಮಗಳು.





# ಕಪಟದಾನ

ಅನೇಕಾನೇಕ ವರ್ಷಗಳ ಹಿಂದೆ ಚಂದ್ರನಗರದ ಒಂದು ಗ್ರಾಮದಲ್ಲಿ ಒಬ್ಬ ಪಟೇಲರಿದ್ದರು. ಅವರಿಗೆ ಎಷ್ಟೋ ಹೊಲಗದ್ದೆಗಳೂ, ಅನೇಕ ಪಶು ಸಂಪತ್ತುಗಳೂ ಇದ್ದವು. ಇಷ್ಟೆಲ್ಲಾ ಇದ್ದರೂ ಅವರೊಬ್ಬ ಪರಮ ಲೋಭಿ. ಏನೋ ಕೆಲಸಕ್ಕೆ ಚಿಕ್ಕದೊಂದು ನಾಣ್ಯ ಖರ್ಚು ಮಾಡ ಬೇಕೆಂದರೆ ತುಂಬಾ ಹೊಟ್ಟೇ ನೋವು ಅನುಭವಿಸುತ್ತಿದ್ದರು.

ಒಂದು ದಿನ ಆ ಪಟೇಲರ ಪಶುಗಳಲ್ಲಿ ಒಂದು ದನಕ್ಕೆ ಏನೋ ರೋಗ ಬಂದು ಒಮ್ಮೆಗೇ ತೀವ್ರ ವಾಗಿ ಬಿಟ್ಟಿತು. ಅದರ ಹೊಟ್ಟೆ ಉಬ್ಬರಿಸಿ ಶ್ವಾಸ ಕೂಡಾ ಸರಿಯಾಗಿ ಬಿಡಲಾಗದೆ ಬಿದ್ದು ತತ್ತಳಿಸ ತೊಡಗಿತು. ಆ ದನ ಸಾಯುವುದೇ ನಿಜವೆಂದು ತೋರಿತು ಪಟೇಲರಿಗೆ. ಅದು ಸಾಯುವುದೆಂಬ ಚಿಂತೆಗಿಂತಲೂ ಸತ್ತುಬಿಟ್ಟರೆ ಅದನ್ನು ಊರಹೊರಗೆ ಸಾಗಿಸಲು ಎರಡು ರೂಪಾಯಿ ಖರ್ಚು ಆಗುವುದೆಂಬ ವಿಚಾರವೇ ದೊಡ್ಡದಾಯಿತು ಪಾಪ !

ಅವರು ತಮ್ಮ ಚಿಂತೆಯನ್ನು ತಮ್ಮ ಸಹ ಭಾಗಿನಿಯಾದ ಹೆಂಡತಿಯೊಂದಿಗೆ ಹೇಳಿಕೊಂಡರು. ಆಕೆ ಕೂಡಾ ಲೋಭ ಗುಣದಲ್ಲಿ ಗಂಡನಿಗೆ ತಕ್ಕವಳೇ ಆಗಿದ್ದು, ಒಂದಿಷ್ಟು ಹೆಚ್ಚಿನವಳೆಂದರೂ ತಪ್ಪಿಲ್ಲ.

"ಮಾಡೋದೇನು ? ಸತ್ತು ಹೋಗುವ ದನವನ್ನು ಉಳಿಸಿಕೊಳ್ಳಲಿಕ್ಕಂತೂ ಸಾಧ್ಯವಿಲ್ಲ. ಸತ್ತ ದನದ ನಷ್ಟದ ಮೇಲೆ ಸುಮ್ಮನೆ ಬೀಳುವ ಖರ್ಚು ತಪ್ಪಿ ಹೋಗುವ ದಾರಿ ಏನಾದರೂ ಇದೆಯೋ ನೋಡಿ" ಎಂದಳು ಹೆಂಡತಿ.

"ಅದನ್ನೇ ನಾನೂ ಆಲೋಚಿಸುವುದು" ಎಂದು ಹೇಳಿ ಪಟೇಲರು ಚಿಂತೆಯ ಭಾರದಿಂದ ಬೀದಿಯ ಜಗಲಿಯಲ್ಲಿ ಕುಳಿತರು. ಆ ಸಮಯಕ್ಕೆ ಆ ದಾರಿಯಾಗಿ ಯಾಚಕ ಬ್ರಾಹ್ಮಣನೊಬ್ಬನು ಬರುತ್ತಿದ್ದನು. ಆ ಬ್ರಾಹ್ಮಣನು ಆ ಊರಿಗೆ ಹೊಸಬನಾಗಿದ್ದನು. ಅವನನ್ನು ನೋಡಿದ ಕೂಡಲೇ ಪಟೇಲರಿಗೆ ಒಂದು ಆಲೋಚನೆ ಮಿಂಚಿತು. ಕೂಡಲೇ ಎದ್ದು ನಿಂತು ಜಗಲಿಯಿಂದಿಳಿದರು.

"ಬನಿರಯ್ಯ, ದೇವರ ಹಾಗೆ ಬಂದಿರಿ. ನಿಮ್ಮಂಥ ಪುಣ್ಯಾತ್ಮರಿಗಾಗಿಯೇ ಕಾದಿದ್ದೇನೆ." ಎಂದು ಆ ಬ್ರಾಹ್ಮಣನನ್ನು ಆಹ್ವಾನಿಸಿದರು ಪಟೇಲರು.

"ತಮ್ಮ ದಯ ! ಏನು ವಿಶೇಷವೋ ?" ಎಂದನು ಯಾಚಕ ಬ್ರಾಹ್ಮಣ.

"ಹಿಂದೆ ನನಗೊಂದು ರೋಗ ಬಂದಿತ್ತು. ರೋಗ ಗುಣವಾದ ಮೂರು ತಿಂಗಳೊಳಗೆ ಬ್ರಾಹ್ಮಣನಿಗೆ ಗೋದಾನ ಮಾಡುವೆನೆಂದು ಹರಕೆ ಹೇಳಿಕೊಂಡೆ. ಈ ದಿನ ಕಡೇ ದಿನ. ಅದಕ್ಕೆ ತಕ್ಕ ಬ್ರಾಹ್ಮಣನನ್ನೇ ನೋಡಿಕೊಂಡಿದ್ದೆ. ಪುಣ್ಯಕ್ಕೆ ನೀವು ಬಂದಿರಿ. ಮಕ್ಕಳು ಮರಿಗಳಿದ್ದವರು ತಾನೇ ? ನನ್ನ ಗೋವನ್ನು ದಾನ ಪಡೆದು ಸಂತೋಷದಿಂದ ತೆಗೆದುಕೊಂಡು ಹೋಗಿ" ಎಂದರು ಪಟೇಲರು.

ಬಡ ಬ್ರಾಹ್ಮಣನಿಗೆ ಪರಮಾನಂದವಾಯಿತು. ಅವನದು ಹೆಂಡತಿ ಮಕ್ಕಳಿರುವ ಸಂಸಾರ. ಹಾಲಿಗಾಗಿ ಬಹಳ ಕಷ್ಟ ಪಡುತ್ತಿದ್ದನು. ಈ ಪಟೇಲರು ಪರಮ ಲೋಭಿ ಎಂದು ಜನರು ಹೇಳುವುದನ್ನು ಕೇಳಿ ಅವರ ಮನೆಗೆ ಆವನು ಯಾಚನೆಗೆ ಬರುತ್ತಿದ್ದಿಲ್ಲ. ಈಗ ನೋಡಿದರೆ ಇವರು ಎಷ್ಟು ದೊಡ್ಡ ದಾನ ಗುಣದವರಾಗಿದ್ದಾರಲ್ಲ !

"ಬ್ರಾಹ್ಮಣನಾಗಿ ದಾನವನ್ನು ಬೇಡ ಎನ್ನುವೆನೆ ? ಆದರೆ ಈ ದಿನ ಅಷ್ಟಮಿ. ಒಳ್ಳೆಯದಲ್ಲ. ನಾಡದು ಬಂದು ತಮ್ಮ ದನವನ್ನು ದಾನ ತೆಗೆದುಕೊಳ್ಳುತ್ತೇನೆ" ಎಂದನು ಬ್ರಾಹ್ಮಣ.

"ಅದೆಲ್ಲಾ ಆಗದು. ಇವತ್ತೇ ಕಡೇ ದಿನ ಅಂದೆನಲ್ಲಾ ! ನಿಮಗೆ ದೋಷವೇನಾದರೂ ಇದ್ದರೆ ಅದಕ್ಕೆ ತಕ್ಕ ಪರಿಹಾರವೂ ಇದ್ದೀತಷ್ಟೆ ? ಇವತ್ತೇ ದಾನವನ್ನು ತೆಗೆದುಕೊಂಡು ಬಿಡಿ." ಎಂದರು ಪಟೇಲರು ಅವಸರ ಪಡಿಸುತ್ತ.

ತಾನು ದಿನ ವಾರ ನೋಡಿಕೊಂಡಿದ್ದರೆ ಪಟೇಲರು ದನವನ್ನು ಇನ್ನೊಬ್ಬರಿಗೆ ಕೊಟ್ಟಾರೆಂದುಕೊಂಡು ಬ್ರಾಹ್ಮಣನು ಪಟೇಲರ ಗೋದಾನ ಪಡೆಯಲು ಸಿದ್ಧನಾದನು.

ಇಬ್ಬರೂ ಪಟೇಲರ ಪಶು ಶಾಲೆಗೆ ಹೋದರು, ಜೀವನ್ಮರಣದ ಅಂಚಿನಲ್ಲಿದ್ದ ದನವನ್ನು ಪಟೇಲರು ಬ್ರಾಹ್ಮಣನಿಗೆ ತೋರಿಸಿ, "ಅದೇ ನಿಮಗೆ ದಾನವಾಗಿ ಸಂದ ದನ. ತೆಗೆದುಕೊಂಡು ಹೋಗಿ" ಎಂದು ಕೈಮುಗಿದು ಹೇಳಿದರು. ಬ್ರಾಹ್ಮಣನಿಗೆ ಪಟೇಲರ ದುರ್ಬುದ್ಧಿ ಅರ್ಥವಾಯಿತು. ಆ ದನದ



ಮೇಲಿನ ಆಸೆ ಬಿಟ್ಟ ಮೇಲೆಯೇ ಪಟೇಲರು ದಾನ ಮಾಡಲು ನಿಶ್ಚಯಿಸಿದ್ದಾರೆ. ಇಲ್ಲದಿದ್ದರೆ ಚಿಕ್ಕಾಸಿಗೆ ಹುಲ್ಲು ತಿನ್ನುವವರಾದ ಈ ಪಟೇಲರೆಂದರೇನು ? ಇವರು ಗೋದಾನ ಮಾಡುವುದೆಂದರೇನು ? ಕೂಡಲೇ ತೆಗೆದುಕೊಂಡು ಹೋಗುವಂತೆ ಹೇಳುವುದು ಕೂಡಾ ಅದಕ್ಕೇ ! ಜನರು ಹೇಳುವುದು ನಿಜವೇ !

"ದನಕ್ಕೆ ಆರೋಗ್ಯ ಸರಿಯಾಗಿದ್ದಂತಿಲ್ಲವಲ್ಲಾ ?" ಎಂದನು ಬ್ರಾಹ್ಮಣ.

"ದಾನಕ್ಕೆ ನಿರ್ಣಯಿಸಿದ್ದು ಇದೇ ದನ, ತೆನೆಯಾದ ದನವಿದು. ನಿನ್ನಿನವರೆಗೆ ಚೆನ್ನಾಗಿತ್ತು, ಇವತ್ತೇನೋ ಬಿದ್ದುಕೊಂಡಿದೆ, ಏನಿದ್ದರೂ ನಿಮ್ಮದೆಂದು ಹೇಳಿದ ಮೇಲೆ ನಿಮ್ಮದೇ ! ಸತ್ತರೂ ನಿಮ್ಮದೇ ಜವಾಬ್ದಾರಿ, ನನ್ನದೇನಿಲ್ಲ !" ಎಂದರು ಪಟೇಲರು.

ಆ ದನವನ್ನು ಮುಟ್ಟಿ ತಡವಿ ಪರೀಕ್ಷಿಸುತ್ತಿದ್ದ ಬ್ರಾಹ್ಮಣನು, "ತಮ್ಮ ದಯ, ನನ್ನ ಭಾಗ್ಯ. ಯಾರ ಅದೃಷ್ಟಕ್ಕೆ ಯಾರು ಹೊಣೆ ? ನಿಮ್ಮ ಸಂಕಲ್ಪವೇ ಮುಖ್ಯ. ನನಗೆ ದಾನ ಕೊಟ್ಟಾಯಿತಷ್ಟೇ! ಒಂದು ಕ್ಷಣ ತಡೀರಿ !" ಎಂದು ಹೇಳಿ ಆ ಬ್ರಾಹ್ಮಣನು ತೋಟಕ್ಕೆ ಹೋಗಿ ಯಾವುದೋ ಸೊಪ್ಪನ್ನು ಹುಡುಕ ತೊಡಗಿದನು.

ಆ ಬ್ರಾಹ್ಮಣನ ತಂದೆ ದೊಡ್ಡ ಪಶು ವೈದ್ಯನಾಗಿದ್ದನು. ಇವನಿಗೆ ಕೂಡಾ ಆ ಚಿಕಿತ್ಸೆ ಅಲ್ಪ ಸ್ವಲ್ಪ ಗೊತ್ತಿತ್ತು. ಅವನು ಸ್ವಲ್ಪ ಹೊತ್ತಿಗೆ ಯಾವುದೋ ಗಿಡದ ಎಲೆಗಳನ್ನು ಕೊಯಿದು ತಂದು ಜಜ್ಜಿ ರಸ ತೆಗೆದು ದನದ ತಲೆಯನ್ನು ಎತ್ತಿ ಹಿಡಿದು ಅದರ ಮೂಗಿನೊಳಗೆ ರಸವನ್ನು ಹಿಂಡಿದನು.

ಕೂಡಲೇ ಆ ದನ ಒಂದೆರಡು ಸಾರಿ ಕಾಲು ಕುಣಿಸಿ ಬಲವಾಗಿ ಸೀನಿತು. ಆಗ ಅದರ ಕುತ್ತಿಗೆಯೊಳಗೆ ಸಿಕ್ಕಿದ್ದ ತಾಳೀಕಾಯಿಯಷ್ಟು ದೊಡ್ಡ ಕಫದ ಉಂಡೆ ಹೊರಗೆ ಬಂದು ಬಿತ್ತು. ಸೆಗಣಿಯೂ ಗೋಮೂತ್ರವೂ ಹೊರಟಿತು. ದನ ಸರಿಯಾದುದನ್ನು ನೋಡುವಾಗ ಪಟೇಲರಿಗೆ ಪ್ರಾಣವೇ ಹೋಗುವಂತೆ ಹೊಟ್ಟೇನೋವು ಬಂತು. ಒಂದು ರೂಪಾಯಿ ಹಣ ಖರ್ಚಾದರೂ ಇದೊಂದು ಮದ್ದು ಮಾಡುತ್ತಿದ್ದರೆ ತನ್ನ ದನ ತನಗೇ ಇರುತ್ತಿತ್ತಲ್ಲಾ ಎಂದು ಹಳ ಹಳಿಸಿಕೊಂಡರು.

ಬ್ರಾಹ್ಮಣನು ಸಂತೋಷದಿಂದ ದನದ ಕೊರಳ ಹಗ್ಗವನ್ನು ಹಿಡಿದುಕೊಂಡು, ಪಟೇಲರ ಅಪ್ಪಣೆ ಪಡೆದು ಮನೆಗೆ ಕರೆದೊಯ್ದನು.

"ಅಯ್ಯೋ ! ಬಂಗಾರದಂಥ ದನವನ್ನು ಸುಮ್ಮ ಸುಮ್ಮನೆ ಯಾಚಕ ಬ್ರಾಹ್ಮಣನಿಗೆ ಕೊಟ್ಟೆನಲ್ಲಾ !" ಎಂದು ಪಟೇಲರು ಹೆಂಡತಿಯೊಂದಿಗೆ ಹೇಳಿದರು. ಇಬ್ಬರಿಗೂ ಆ ದಿನವಿಡೀ ಶೋಕವೇ ಆಯಿತು.






ಒಂದು ಕಾಲದಲ್ಲಿ ಪ್ರಸಿದ್ಧವಾದ ಸೂರ್ಯ ವಂಶದಲ್ಲಿ ಅರುಣನೆಂಬ ರಾಜನಿದ್ದನು. ಅವನ ಕುಮಾರನ ಹೆಸರು ಸತ್ಯವ್ರತ. ಸತ್ಯವ್ರತನ ಗುಣವೂ ಪ್ರವರ್ತನೆಯೂ ಸ್ವಲ್ಪವೂ ಒಳ್ಳೆಯದಾಗಿರಲಿಲ್ಲ. ಪ್ರಜೆಗಳನ್ನು ನಾನಾ ವಿಧವಾಗಿ ಕಾಡಿಕೊಂಡಿದ್ದನು. ಅವನನ್ನು ಕಂಡರೆ ಎಲ್ಲರಿಗೂ ಭಯವೇ.

ಒಂದು ಸಾರಿ ಅವನು ಮದುವೆಗೆ ಸಿದ್ಧಳಾಗಿದ್ದ ಒಬ್ಬಳು ಬ್ರಾಹ್ಮಣ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ಬಿಟ್ಟನು. ಅವಳ ಬಧುಗಳು ಸಂತಾಪ ಪಡುತ್ತ ಗುಂಪಾಗಿ ಕೂಡಿ ಅರುಣ ರಾಜನೊಂದಿಗೆ ಮೊರೆಯಿಡಲು ಹೋದರು. ಅವರನ್ನು ನೋಡಿದ ಕೂಡಲೇ ತನ್ನ ಮಗನು ಏನೋ ಮಾಡಬಾರದ ಕೆಲಸವನ್ನು ಮಾಡಿ, ಅವರಿಗೆ ಕಷ್ಟ ತಂದಿದ್ದಾನೆಂದು ಅರುಣ ರಾಜನಿಗೆ ಗೊತ್ತಾಯಿತು. ಅವನು ಶೋಕಾರ್ತ ಬ್ರಾಹ್ಮಣರನ್ನು ನೋಡಿ, "ನನ್ನ ಮಗನು ತಿಳಿದೋ ತಿಳಿಯದೆಯೋ ನಿಮಗೇನಾದರೂ ಕೇಡು ಮಾಡಿದನೇ ? ಹೇಗೆ ಹೇಳುವುದೆಂದು ಹೆದರಬೇಕಾಗಿಲ್ಲ. ನಿರ್ಭಯವಾಗಿ ಹೇಳಿರಿ" ಎಂದನು.

"ಹೌದು ಮಹಾರಾಜಾ. ಮದುವೆಗೆ ತಯಾರಾಗಿರುವ ನಮ್ಮ ಹುಡುಗಿಯನ್ನು ರಾಜಕುಮಾರನು ಎತ್ತಿಕೊಂಡು ಹೋದನು." ಎಂದರು ಬ್ರಾಹ್ಮಣರು.

ಅದನ್ನು ಕೇಳಿ ರಾಜನು ಅತ್ಯಂತ ಶೋಕದಿಂದ, ತನ್ನ ಮಗನನ್ನು ಕರೆಯಿಸಿ, "ದುಷ್ಟನೇ ! ನಿನ್ನ ಹೆಸರನ್ನೇ ಹಾಳು ಮಾಡಿಕೊಂಡೆಯಲ್ಲೋ ! ಇಂತಹ ಪಾಪದ ಕಾರ್ಯವನ್ನು ಏತಕ್ಕಾಗಿ ಮಾಡಿದೆ ? ನೀನು ಕ್ಷತ್ರಿಯ ವಂಶದಲ್ಲಿ ಹುಟ್ಟಬೇಕಾದವನೇ ಅಲ್ಲ, ತಪ್ಪಿ ನನ್ನ ಮಗನಾಗಿ ಹುಟ್ಟಿದೆ. ನನ್ನ ಕಣ್ಣೆದಿರಿಗೆ ಕಾಣಬೇಡ ! ಎತ್ತಾದರೂ ಹೊರಟು ಹೋಗು !" ಎಂದು ಛೀತ್ಕರಿಸಿದನು.

ಸತ್ಯವ್ರತನು ಸ್ವಲ್ಪವೂ ಶಂಕಿಸದೆ, "ಎಲ್ಲಿಗೆ ಹೋಗಲಿ ಹೇಳಿರಿ !" ಎಂದನು.

"ನಾಯಿಗಳನ್ನು ತಿನ್ನುವವರು ಕೂಡಾ ಮಾಡಲಾರದ ಕೆಲಸ ಮಾಡಿರುವ ನೀನು ಚಾಂಡಾಲರ

೨೪. ತ್ರಿಶಂಕು ಕಥೆ



ಕೇರಿಗೇ ನಡೆ, ಹೋಗು ! ಕಾಡಾಡಿಯಾಗಿ ತಿರುಗು. ನಿನ್ನಿಂದಾಗಿ ನಮ್ಮ ವಂಶಕ್ಕೆ ಹಾಳು ಕಳಂಕ ಬಂತು !" ಎಂದು ಸಂಕಟ ಪಡುತ್ತ ಹಣೆ ಬಡೆದುಕೊಂಡನು ಅರುಣರಾಜ.

ಅವರ ಕುಲ ಪುರೋಹಿತನಾದ ವಸಿಷ್ಠನೂ ಅರುಣ ರಾಜನ ವೈಖರಿಯನ್ನೇ ಎತ್ತಿ ಹಿಡಿದು ಸತ್ಯವ್ರತನನ್ನು ಜರೆದನು. ಆದುದರಿಂದ ಸತ್ಯವ್ರತನು ತಂದೆಯ ಮೇಲಿನ ಕೋಪವನ್ನು ಕೂಡಾ ವಸಿಷ್ಠನ ಮೇಲೆಯೇ ಸರಿಸಿ, ತುಂಬಿದ ತನ್ನ ಕೋಪವನ್ನು ಅಡಗಿಸಿಕೊಂಡು, ತನ್ನ ಬಿಲ್ಲು ಬಾಣಗಳೊಂದಿಗೆ ಕಾಡಿಗೆ ಹೊರಟು ಹೋದನು. ಅಲ್ಲಿ ಕಾಡುಬೇಡರ ಮಧ್ಯದಲ್ಲಿ ತಿರುಗಿಕೊಂಡಿದ್ದನು.

ಇದ್ದ ಒಬ್ಬ ಮಗನನ್ನು ತೊಲಗಿಸಿಕೊಂಡ ಅರುಣ ರಾಜನು ಮತ್ತೆ ಪುತ್ರರಾಗಬೇಕೆಂಬ ವಾಂಛೆಯಿಂದ ತಪಸ್ಸು ಮಾಡಲು ಅರಣ್ಯಕ್ಕೆ ಹೋದನು. ರಾಜ್ಯವನ್ನು ಮಂತ್ರಿ ಪುರೋಹಿತರು ನೋಡಿಕೊಂಡಿರಲು, ಆ ರಾಜ್ಯದಲ್ಲಿ ಅಧರ್ಮವು ನಡೆಯಿತೆಂಬ ಕಾರಣದಿಂದ ಇಂದ್ರನು ಮಳೆ ಸುರಿಸುವುದನ್ನು ನಿಲ್ಲಿಸಿದನು. ಅದರಿಂದ ದೇಶಕ್ಕೆ ಬರಬಂದಿತು.

ಅದೇ ಕಾಲದಲ್ಲಿ ವಿಶ್ವಾಮಿತ್ರನು ತನ್ನ ಹೆಂಡತಿಯನ್ನೂ ಮಕ್ಕಳನ್ನೂ ಬಿಟ್ಟು ತಪಸ್ಸು ಮಾಡಲಿಕ್ಕಾಗಿ ಕೌಶಿಕೀ ನದಿಯ ತೀರಕ್ಕೆ ಹೋದನು. ಇಷ್ಟರಲ್ಲಿ ಬರಗಾಲದಪೀಡೆ ತೀವ್ರವಾಗಿ ಬಂದುದರಿಂದ ವಿಶ್ವಾಮಿತ್ರನ ಮಕ್ಕಳು ಹಸಿವಿನ ಕಾಟ ತಡೆಯಲಾರದೆ "ಅಮ್ಮಾ ! ಅನ್ನ ! ಹಸಿವೆ !" ಎಂದು ಅಳತೊಡಗಿದರು. ಅದನ್ನು ನೋಡಿ ವಿಶ್ವಾಮಿತ್ರನ ಪತ್ನಿ ಮಹಾಶೋಕಕ್ಕೆ ಗುರಿಯಾದಳು. ಅವಳ ಹತ್ತಿರ ಚಿಕ್ಕಾಸು ಕೂಡಾ ಇರಲಿಲ್ಲ. ಗಂಡನು ತನ್ನನ್ನೂ ಮಕ್ಕಳನ್ನೂ ಬರೀ ಮನೆಯಲ್ಲಿ ಬಿಟ್ಟು ತಪಸ್ಸು ಮಾಡಲು ಹೋದರೆ ಅವಳೇನು ಮಾಡಬೇಕು ? ರಾಜನ ಬಳಿಗಾದರೂ ಹೋಗಿ ಯಾಚಿಸೋಣವೆಂದರೆ ರಾಜನೂ ನಗರದಲಿಲ್ಲ. ಅವನೂ ಮಕ್ಕಳ ಬಯಕೆಯಿಂದ ತಪಸ್ಸಿಗೇ ಹೋಗಿದ್ದಾನೆ. ದಿಕ್ಕು ತಪ್ಪಿದ ಹೆಂಗುಸೊಬ್ಬಳು ಮಕ್ಕಳ ಹಸಿವಿನ ಸಂಕಟವನ್ನು ಹೇಗೆ ತಾನೇ ತೀರಿಸಲು ಸಾಧ್ಯ ? ಇದೇನೂ ಒಂದೆರಡು ಹೊತ್ತಿನ ಮಾತೂ ಅಲ್ಲ. ಅವಳು ತೀವ್ರವಾದ ಆಲೋಚನೆಯಿಂದ ಬೆಂದು ಸುಟ್ಟು ಹೋಗುತ್ತಿದ್ದಳು.

"ಎಲ್ಲರೂ ಹಸಿವಿನಿಂದ ಒಣಗಿ ಸತ್ತು ಹೋಗುವುದಕ್ಕಿಂತ, ಮನಸ್ಸನ್ನು ಕಲ್ಲು ಮಾಡಿ ಒಬ್ಬ ಮಗನನ್ನು ಮಾರಿ ಬಿಟ್ಟರೆ ಸ್ವಲ್ಪ ಹಣ ಕೈಗೆ ಬರುತ್ತದೆ. ಮಾರಲ್ಪಟ್ಟವನು ಕೊಳ್ಳಲ್ಪಟ್ಟವರ ಮನೆಯಲ್ಲಿ ತಿಂದುಂಡುಕೊಂಡಿರುತ್ತಾನೆ. ಹೀಗೆ ಸ್ವಲ್ಪ ಕಾಲ ಪ್ರಾಣ ಉಳಿಸಿಕೊಳ್ಳಬಹುದು. ಮತ್ತೇನು ಮಾಡಲಿ? ಯಾವ ತಾಯಿಗೂ ಬರಬಾರದ ಪರಿಸ್ಥಿತಿ ನನಗೆ ಬಂದಿತು !" ಎಂದು ಒಂದು ನಿಶ್ಚಯಕ್ಕೆ ಬಂದಳು ವಿಶ್ವಾಮಿತ್ರನ ಹೆಂಡತಿ.



ಆಮೇಲೆ ತಡ ಮಾಡದೆ ಅವಳು ತನ್ನ ಕುಮಾರರಲ್ಲಿ ಮಧ್ಯಮದವನ ಕೊರಳಿಗೆ ದರ್ಭೆಯ ದಾರವನ್ನು ತಗಲಿಸಿ, ಅವನನ್ನು ವಿಕ್ರಯ ಪಶುವಿನ ಹಾಗೆ ಕರೆದುಕೊಂಡು ಮನೆಯಿಂದ ಹೊರಟಳು. ಉಳಿದ ಮಕ್ಕಳಿಬ್ಬರೂ ತಾಯಿಯ ಸೆರಗಿನ ತುದಿಯನ್ನು ಹಿಡಿದು "ಎಲ್ಲಿಗೆ ಹೋಗುವಿಯಮ್ಮಾ ?" ಎಂದು ಕೇಳಿದರು. ತಾಯಿ ಆ ಮಕ್ಕಳಿಗೆ ಮನೆಯಲ್ಲಿರುವಂತೆ ಹೇಳಿ ಮುಂದು ವರಿಯಲು, ಮೂವರು ಕುಮಾರರೂ ಅಳ ತೊಡಗಿದರು.

ಆಕಸ್ಮಿಕವಾಗಿ ಆ ಕಡೆಗೇ ಬಂದಿದ್ದ ಸತ್ಯವ್ರತನು ಹೃದಯದ್ರಾವಕವಾದ ಆ ದೃಶ್ಯವನ್ನು ನೋಡಿ, ಆ ತಾಯಿಯೊಂದಿಗೆ, "ಏನಮ್ಮಾ ಇದು? ಏನು ಬಂತು ನಿನಗೆ ? ಎದೆಯೊಡೆಯುವ ಹಾಗೆ ಅಳುತ್ತಿರುವ ಈ ಹುಡುಗನ ಕೊರಳಿಗೆ ಹಗ್ಗಕಟ್ಟಿ ಎಲ್ಲಿಗೆ ಎಳೆದು ಕೊಂಡು ಹೋಗುತ್ತಿರುವೆ ? ಏನು ನಡೆಯಿತು ? ಯಾರು ನೀನು ?" ಎಂದು ಕೇಳಿದನು.

"ವಿಶ್ವಾಮಿತ್ರನೆಂಬ ಮಹಾ ಪುರುಷನು ಹೆಂಡತಿಯಾದ ನನ್ನನ್ನೂ, ಈ ಮಕ್ಕಳನ್ನೂ ಬಿಟ್ಟು ತಪಸ್ಸು ಮಾಡಲು ಹೋಗಿ ಬಿಟ್ಟನು. ಆ ಮಹಾತ್ಮನ ಪತ್ನಿಯಾದ ನನಗೆ ದಿಕ್ಕಿಲ್ಲದಾಯಿತಪ್ಪಾ. ಕೈಯಲ್ಲಿ ಚಿಕ್ಕಾಸಿಲ್ಲ ! ಬರಗಾಲದ ಪೆಟ್ಟಿನಿಂದ ದಾನಧರ್ಮಗಳೆಲ್ಲಾ ನಿಂತಿವೆ. ಮಕ್ಕಳ ತಾಯಿಯಾದ ನಾನು ಏನು ತಾನೇ ಮಾಡಲಿ ? ಮಕ್ಕಳನ್ನು ಪೋಷಿಸದೆ ಹೇಗಿರಲಿ ? ಅದಕ್ಕೇ ಇವನನ್ನು ಮಾರಲು ಒಯ್ಯುತ್ತಿದ್ದೇನೆ." ಎಂದಳು ವಿಶ್ವಾಮಿತ್ರನ ಹೆಂಡತಿ.

"ಛೀ ಛೀ ! ಇದೇನು ಕೆಲಸ ತಾಯೇ ? ನೀನು ನಿನ್ನ ಆಶ್ರಮಕ್ಕೆ ಹಿಂದಿರುಗಿ ಹೋಗು. ದಿನಾ ನಿನ್ನ ಮಕ್ಕಳಿಗಾಗಿ ಆಹಾರವನ್ನು ಮೂಟೆ ಗಟ್ಟಿ ತಂದು ಆಶ್ರಮದ ಮರದ ಮೇಲೆ ಇಡುತ್ತೇನೆ. ಹೇಳಿದ ಮಾತು ತಪ್ಪುವವನಲ್ಲ ನಾನು. ಸ್ವಲ್ಪಕಾಲದ ಮೇಲೆ ನಿನ್ನ ಗಂಡ ಬಂದೇ ಬರುತ್ತಾನೆ. ಚಿಂತೆ ಬಿಡಮ್ಮಾ" ಎಂದನು ಸತ್ಯವ್ರತ. ಅವನ ಮಾತು ಅವಳ ಹೃದಯಕ್ಕೆ ಹಾಲೆರೆದಂತಾಯಿತು. ಆ ಮಾತಿನಿಂದಲೇ ಅರ್ಧ ಹಸಿವೆ ಕಡಿಮೆಯಾದಂತಾಯಿತು. ಸಂತೋಷದಿಂದ ಅವಳು ಮಕ್ಕಳನ್ನು ಕರೆದುಕೊಂಡು ಆಶ್ರಮಕ್ಕೆ ಹಿಂದಿರುಗಿದಳು. ಅವಳ ಮಧ್ಯದ ಮಗನ ಕೊರಳಿಗೆ ಹಗ್ಗ ಕಟ್ಟಿದ್ದರಿಂದ ಅವನಿಗೆ ಗಾಲವನೆಂದು ಹೆಸರು ಬಂತು. ಸತ್ಯವ್ರತನು ಹೇಳಿದ ಮಾತು ತಪ್ಪಲಿಲ್ಲ. ದಿನಾ ಅರಣ್ಯದಲ್ಲಿ ಸಿಗುವ ಆಹಾರ ವಸ್ತುಗಳನ್ನು ಸಂಗ್ರಹಿಸಿ ಮೂಟೆ ಗಟ್ಟಿ ತಂದು ವಿಶ್ವಾಮಿತ್ರನ ಆಶ್ರಮದ ಹತ್ತಿರವಿರುವ ಮರದ ಕೊಂಬೆಗೆ ಕಟ್ಟಿಡುತ್ತಿದ್ದನು. ಅದರಿಂದ ವಿಶ್ವಾಮಿತ್ರನ ಹೆಂಡತಿ, ಮಕ್ಕಳಿಗೆ ಅಡಿಗೆ ಮಾಡಿ ಹಾಕಿ, ಉಳಿದುದನ್ನು ತಾನೂ ತಿನ್ನುತ್ತ ಹೀಗೆಯೇ ದಿನ ದೂಡಿಕೊಂಡು ಬಂದಳು. ಅವಳ ಕಷ್ಟಗಳು ಸೌಮ್ಯಸ್ಥಿತಿಗೆ ಬಂದುವು.

ಅರುಣರಾಜನು ಪುತ್ರವಾಂಛೆಯಿಂದ ತಪಸ್ಸು ಮಾಡುವೆನೆಂದು ಅರಣ್ಯಕ್ಕೆ ಹೋದಂದಿನಿಂದ,




ವಸಿಷ್ಠನು ಅಯೋಧ್ಯೆಯಲ್ಲೇ ಇದ್ದು ರಾಜನಗರವನ್ನೂ, ಅರಮನೆಯನ್ನೂ ನೋಡಿಕೊಂಡಿದ್ದನು.

ಒಂದು ದಿನ ಅರಣ್ಯದಲ್ಲಿ ಆಹಾರ ಪದಾರ್ಥಗಳೇನೂ ಸಿಗದ್ದರಿಂದ ಸತ್ಯವ್ರತನು ನಗರಕ್ಕೆ ಬಂದನು. ಅಲ್ಲಿ ಅವನ ಕಣ್ಣಿಗೆ ವಸಿಷ್ಠನ ಹೋಮಧೇನು ಕಾಣಿಸಿತು. ವಸಿಷ್ಠನೆಂದರೆ ಮೊದಲೇ ಕೋಪದಲ್ಲಿರುವ ಸತ್ಯವ್ರತನು ಅವನ ಹೋಮಧೇನುವನ್ನು ಅಪಹರಿಸಿ ಕಟುಕರವನಿಗೆ ಮಾರಿ, ಆ ಹಣದಿಂದ ಆಹಾರ ಧಾನ್ಯ ಮೊದಲಾದುವನ್ನು ಕೊಂಡುಕೊಂಡು ಮೂಟೆ ಕಟ್ಟಿ ವಿಶ್ವಾಮಿತ್ರನ ಆಶ್ರಮದ ಮರದ ಕೊಂಬೆಗೆ ಕಟ್ಟಿ ಇಟ್ಟು ಬಿಟ್ಟನು. ಆ ದೊಡ್ಡ ಮೂಟೆಯನ್ನು ನೋಡಿ, ಅದರ ವಿವರ ತಿಳಿಯದ ವಿಶ್ವಾಮಿತ್ರನ ಹೆಂಡತಿಯೂ ಮಕ್ಕಳೂ ಸಂತೋಷದಿಂದ ಅದನ್ನು ಉಪಯೋಗಿಸಿ ಕೊಂಡರು.

ತನ್ನ ಹೋಮಧೇನು ಅಪಹೃತವಾಗಿ ಸಾಯಲಿಕ್ಕೆ ಸತ್ಯವ್ರತನೇ ಕಾರಣವೆಂಬ ಸಂಗತಿ ವಸಿಷ್ಠನಿಗೆ ಗೊತ್ತಾಯಿತು. ಅವನು ಅರಣ್ಯಕ್ಕೆ ಹೋಗಿ ಸತ್ಯವ್ರತನನ್ನು ಕಂಡು ಹಿಡಿದು, "ಎಲವೋ ದುಷ್ಟ ಕಿರಾತಕಾ! ನೀನೊಬ್ಬ ತ್ರಿಶಂಕು! ಒಂದು ಸಾರಿ ಬ್ರಾಹ್ಮಣ ಬಾಲಿಕೆಯನ್ನು ಅಪಹರಿಸಿದೆ, ಎರಡನೇ ಸಾರಿ ತಂದೆಯ ಕೋಪಕ್ಕೆ ಈಡಾಗಿ ತೊಲಗಿಸಲ್ಪಟ್ಟೆ, ಈಗ ಕುಲಪುರೋಹಿತನಾದ ನನಗೇ ಕೇಡು ಬಗೆದು ಗೋಹತ್ಯದ ಮಹಾಪಾಪ ಮಾಡಿದೆ. ಇಂತಹ ನೀನು ಇನ್ನು ಮೇಲೆ ತ್ರಿಶಂಕುವೆನಿಸಿ ಪಿಶಾಚಾಕಾರದಲ್ಲಿ ಅಲೆದು ಕೊಂಡಿರು! ಇದೇ ನಿನಗೆ ತಕ್ಕದಂಡನೆ!" ಎಂದು ಶಾಪಕೊಟ್ಟನು.

ಅಂದಿನಿಂದ ಸತ್ಯವ್ರತನು ಪಿಶಾಚಿಯ ರೂಪದಲ್ಲಿ ತಿರುಗುತ್ತ, ತ್ರಿಶಂಕುವೆಂದು ಕರೆಯಲ್ಪಟ್ಟನು. ಆ ಸ್ಥಿತಿಯಲ್ಲಿ ಅವನು ಒಬ್ಬ ಮುನಿಕುಮಾರನಿಂದ ಮಹಾದೇವಿಯ ನವಾಕ್ಷರೀ ಮಂತ್ರೋಪದೇಶವನ್ನು ಪಡೆದು, ದೇವಿಯನ್ನು ಧ್ಯಾನಿಸಿಕೊಂಡು ತಪಸ್ಸನ್ನು ಮಾಡಲು ತೊಡಗಿದನು. ನವಾಕ್ಷರೀ ಮಂತ್ರವನ್ನು ಜಪಿಸುತ್ತ ಸ್ವಲ್ಪ ಕಾಲ ತಪಸ್ಸಿನಲ್ಲಿದ್ದು, ದೇವಿಯ ಪ್ರೇರಣೆಯಂತೆ, ತಪಸ್ಸಿನಿಂದ ಎದ್ದು ಬ್ರಾಹ್ಮಣರ ಬಳಿಗೆ ಹೋಗಿ, "ಅಯ್ಯಾ, ನಾನು ಮಹಾದೇವಿಯನ್ನು ಹೋಮದಿಂದ ತೃಪ್ತಿ ಪಡಿಸಬೇಕಾಗಿದೆ. ನೀವು ಋತ್ವಿಕ್ಕುಗಳಾಗಿದ್ದು ನನ್ನಿಂದ ಹೋಮ ಮಾಡಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. ನನ್ನ ಹೆಸರು ಸತ್ಯವ್ರತ" ಎಂದನು.

ಆಗ ಬ್ರಾಹ್ಮಣರು ಅವನನ್ನು ನೋಡಿ, "ನಿನ್ನನ್ನು ನಿನ್ನ ಕುಲಗುರುವೇ ಪಿಶಾಚಾಗುವಂತೆ ಶಪಿಸಿದ್ದಾರೆ. ಇಂತಹ ನೀನು ವೇದೋಕ್ತ ಕರ್ಮಗಳನ್ನು ಮಾಡಲು ಅರ್ಹನಲ್ಲ. ಮಾಡಿಸಲು ನಮ್ಮಿಂದಲೂ ಸಾಧ್ಯವಿಲ್ಲ" ಎಂದು ಅವನನ್ನು ಜರೆದರು.

ಇದರಿಂದ ಸತ್ಯವ್ರತನಿಗೆ ಜೀವಿತದ ಮೇಲೆಯೇ ವಿರಕ್ತಿ ಹುಟ್ಟಿತು. ತಂದೆ ತನಗೆ ರಾಜ್ಯವೇನೂ ಇಲ್ಲದಂತೆ ಮಾಡಿದನು. ಕುಲಗುರು ತನ್ನನ್ನು ಶಪಿಸಿ

ಬಿಟ್ಟನು. ತಾನೀಗ ಯಾವ ಕೆಲಸಕ್ಕೂ ಉಪಯೋಗವಿಲ್ಲದವನಾಗಿಬಿಟ್ಟೆನು. ಇನ್ನು ಬದುಕಿರುವುದರಿಂದ ಪ್ರಯೋಜನವೇನಿದೆ ?

ಹೀಗೆಂದುಕೊಂಡು ತ್ರಿಶಂಕುವಾದ ಸತ್ಯವ್ರತನು ಒಣ ಕಟ್ಟಿಗೆಗಳಿಂದ ಒಂದು ಚಿತಿಯನ್ನು ಪೇರಿಸಿ, ಅದರಲ್ಲಿ ಬಿದ್ದು ಸುಟ್ಟು ಭಸ್ಮವಾಗಿ ಹೋಗಲು ನಿಶ್ಚಯಿಸಿದನು. ಚಿತಿ ಉರಿಯುತ್ತಿರಲು ಅವನು ಸ್ನಾನಮಾಡಿ ಹಾರಲು ಸಿದ್ಧನಾಗಿ ದೇವಿಯನ್ನು ಧ್ಯಾನಿಸುತ್ತಿರುವಾಗ, ಆಕಾಶದಲ್ಲಿ ದೇವಿ ಪ್ರತ್ಯಕ್ಷಳಾಗಿ, "ಕಂದಾ ! ಅವಸರಪಡಬೇಡ. ವೃದ್ಧನಾದ ನಿನ್ನ ತಂದೆ ಈಗ ಶಾಂತನಾಗಿ ನಿನಗೆ ರಾಜ್ಯವನ್ನು ಕೊಟ್ಟು, ನಿರ್ವಿಚಾರದಿಂದ ತಪಸ್ಸು ಮಾಡಲು ಸಿದ್ಧನಾಗುತ್ತಾನೆ. ನನ್ನ ಪ್ರೀತಿಗೆ ಪಾತ್ರನಾಗಿರುವ ನಿನಗೆ ಪಟ್ಟಾಭಿಷೇಕವಾಗಲಿದೆ. ನಾಳೆಯೇ ನಿನ್ನ ತಂದೆಯ ಅಪ್ಪಣೆಯಂತೆ ಮಂತ್ರಿಗಳು ನಿನ್ನನ್ನು ಕರೆದುಕೊಂಡು ಹೋಗಲು ಬರುತ್ತಾರೆ. ಇನ್ನು ಚಿಂತಿಸಬೇಡ" ಎಂದು ಹೇಳಿ ಅದೃಶ್ಯಳಾದಳು. ಅವಳ ಕೃಪೆಯಿಂದ ಅವನ ಪಿಶಾಚರೂಪವು ಹೋಯಿತು.

ತ್ರಿಶಂಕು ತುಂಬಾ ಸಮಾಧಾನಗೊಂಡು, ಆತ್ಮಹತ್ಯದ ಪ್ರಯತ್ನವನ್ನು ಬಿಟ್ಟನು. ಈ ನಡುವೆ ನಾರದನು ತಪಸ್ಸಿನಲ್ಲಿರುವ ಅರುಣರಾಜನ ಬಳಿಗೆ ಹೋಗಿ, "ನಿನ್ನ ಮಗನು ಜೀವಿತದ ಮೇಲೆ ವಿರಕ್ತಿ ಹುಟ್ಟಿ ಆತ್ಮಹತ್ಯ ಮಾಡಿಕೊಳ್ಳಲು ನಿಶ್ಚಯಿಸಿದ್ದಾನೆ. ಅದರ ಪಾಪದ ಅಂಶ ನಿನಗೂ ಬರಲಿದೆ" ಎಂದನು. ಅದನ್ನು ಕೇಳಿ ಅರುಣನು ತಪಸ್ಸು ಬಿಟ್ಟು ರಾಜಧಾನಿಗೆ ಹಿಂದಿರುಗಿ ಮಂತ್ರಿಗಳನ್ನು ಕರೆದು, "ನಾನು ಕೋಪಾವೇಶದಿಂದ ಹೋಗೆಂದ ಕೂಡಲೇ ನನ್ನ ಮಗನು ಅರಣ್ಯಕ್ಕೆ ಹೋಗಿಬಿಟ್ಟನು. ಅವನನ್ನು ಹುಡುಕಿ ಕರೆತಂದು ಪಟ್ಟಾಭಿಷೇಕ ಮಾಡಿರಿ. ನಾನು ಇನ್ನು ಯಾವ ಕೋರಿಕೆಯೂ ಇಲ್ಲದೆ ತಪಸ್ಸು ಮಾಡಿ ದೇಹಬಿಡಲು ನಿಶ್ಚಯಿಸಿದ್ದೇನೆ" ಎಂದನು.



ಅದರಂತೆ ಮಂತ್ರಿಗಳು ಹೋಗಿ ತ್ರಿಶಂಕುವಾದ ಸತ್ಯವ್ರತನನ್ನು ಕರೆದುತಂದು ತಂದೆಯ ಇದಿರು ನಿಲ್ಲಿಸಿದರು. ವಿಚಾರಗ್ರಸ್ತಮುಖದ, ಜಡೆಗಟ್ಟಿಹೋದ ತಲೆಗೂದಲಿನ ಮಗನನ್ನು ನೋಡಿ ಅರುಣನಿಗೆ ತುಂಬಾ ಪಶ್ಚಾತ್ತಾಪವಾಯಿತು. ರಾಜ್ಯಾರ್ಹತೆಗೆ ತಕ್ಕವನಾಗುವಂತೆ ಮಗನಿಗೆ ತಕ್ಕ ಶಿಕ್ಷಣದಿಂದ ತಿದ್ದಿಸದೆ, ಕಾಡಿಗೆ ಓಡಿಸಿದ ತನ್ನ ಮೇಲೆಯೇ ಅರುಣನಿಗೆ ಅಸಹ್ಯವೂ ನಾಚಿಗೆಯೂ ಉಂಟಾಯಿತು. ತನ್ನ ಇದಿರಿನಲ್ಲಿ ನಿಂತ ಮಗನನ್ನು ಆಲಿಂಗಿಸಿ, ರಾಜನೀತಿಯನ್ನು ಅವನಿಗೆ ಬೋಧಿಸಿ, ತಾನೇ ಇದ್ದು ಪಟ್ಟಾಭಿಷೇಕವನ್ನೂ ಮಾಡಿಸಿದನು. ಅಂಬಾದೇವಿಯ ಕೃಪೆಗೆ ಪಾತ್ರನಾದ ತ್ರಿಶಂಕುವಿನ ಮೇಲಿದ್ದ ವಸಿಷ್ಠನ ಶಾಪಪ್ರಭಾವವು ಹೋದುದರಿಂದ, ವಸಿಷ್ಠನೂ ಕೋಪವನ್ನು ಮರೆತು ಪ್ರಸನ್ನನಾಗಿದ್ದನು.

ಅರುಣನು ನಿರ್ವಿಚಾರಭಾವದಿಂದ ತಪಸ್ಸಿಗೆ ಹೋದ ಮೇಲೆ ತ್ರಿಶಂಕು ಒಳ್ಳೆಯ ರೀತಿಯಲ್ಲಿ



"ಅಯ್ಯಾ ರಾಜನೇ, ಮಾನವ ಶರೀರದೊಂದಿಗೆ ಸ್ವರ್ಗಕ್ಕೆ ಹೋಗಲು ಯಾವ ಮಾನವರಿಗೂ ಸಾಧ್ಯವಿಲ್ಲ. ಯಜ್ಞಯಾಗ ಮಾಡಿದವರು ಮಾನವ ಶರೀರ ಬಿಟ್ಟು ಸ್ವರ್ಗಕ್ಕೆ ಹೋಗುತ್ತಾರೆಯೇ ಹೊರತು ನಿನ್ನ ಅಪೇಕ್ಷೆಯಂತೆ ಎಂದಿಗೂ ಸಾಧ್ಯವಿಲ್ಲ. ಯಜ್ಞ ಮಾಡಿದುದರಿಂದ ಉಂಟಾಗುವ ಹೊಸ ಶರೀರದೊಂದಿಗೆ ನೀನು ಅಪೇಕ್ಷಿಸುವ ಎಲ್ಲಾ ಸುಖಗಳನ್ನೂ ಅನುಭವಿಸಬಹುದು. ಈ ಶರೀರದೊಂದಿಗೆ ನಿನ್ನನ್ನು ಸ್ವರ್ಗಕ್ಕೆ ಕಳುಹಿಸುವ ಶಕ್ತಿ ನನಗಿಲ್ಲ" ಎಂದು ಖಂಡಿತವಾಗಿ ಹೇಳಿದನು ವಸಿಷ್ಠ. ತ್ರಿಶಂಕು ಅದನ್ನು ಬೇರೆ ವಿಧವಾಗಿ ಅರ್ಥ ಮಾಡಿಕೊಂಡನು. ವಸಿಷ್ಠನು ಹಿಂದಿನ ಕೋಪವನ್ನು ಮರೆತಿಲ್ಲವೆಂತಲೇ ಹೀಗೆ ಹೇಳುವನೆಂದು ತ್ರಿಶಂಕು ಅಂದುಕೊಂಡನು.

"ನೀವು ಏಕೆ ಹೀಗೆ ಹೇಳುವಿರೆಂದು ನನಗೆ ಗೊತ್ತು. ನೀವು ಒಬ್ಬರೇ ಪುರೋಹಿತರಲ್ಲ. ನಾನು ನನಗೆ ಬೇಕಾದ ಯಜ್ಞವನ್ನು ಬೇರೆ ಪುರೋಹಿತರಿಂದ ಮಾಡಿಸಿಕೊಳ್ಳುತ್ತೇನೆ" ಎಂದನು.

ಕೂಡಲೇ ವಸಿಷ್ಠನು ಕೋಪದಿಂದ, "ದುಷ್ಟ ಮನಸ್ಸಿನವನೇ! ಮರೆತ ನನ್ನ ಕೋಪವನ್ನು ಬಡಿದೆಬ್ಬಿಸುವೆಯಾ? ನಿನ್ನಂಥ ಗೋಹತ್ಯ, ಕನ್ಯಾಪಹರಣ ಮಾಡಿದವನು ಹೊಸ ಶರೀರ ಧರಿಸಿದರೂ ಸ್ವರ್ಗಸಿಗದು! ನೀನು ಮತ್ತೆ ಚಾಂಡಾಲನಾಗು!" ಎಂದು ಶಪಿಸಿಬಿಟ್ಟನು.

ಕೂಡಲೇ ತ್ರಿಶಂಕುವಿಗೆ ಚಾಂಡಾಲ ರೂಪವೂ ಬಂದುಬಿಟ್ಟಿತು, ಆ ರೂಪದಿಂದ ಅವನಿಗೆ ಮನೆಗೆ ಹೋಗಲು ಮನಸ್ಸು ಒಪ್ಪಲಿಲ್ಲ. ಹೆಂಡತಿ ಎಷ್ಟೇ ಪತಿವ್ರತೆಯಾದರೂ ಚಾಂಡಾಲನಾಗಿ ಬಂದ ಗಂಡನನ್ನು ಸಹಿಸಲಾರಳು. ಮಂತ್ರಿಗಳೂ, ಬಂಧುಗಳೂ ಸಹಾ ಹತ್ತಿರ ಸುಳಿಯಲು ಬಿಡರು. ಇನ್ನು ಮೇಲೆ ಬದುಕಿರುವುದಕ್ಕಿಂತ ಸಾಯುವುದೇ ಒಳ್ಳೆಯದು. ಇನ್ನೇನೂ ಕರ್ತವ್ಯವಿಲ್ಲ. ರಾಜ್ಯಭಾರ ಮಾಡಿ

ರಾಜ್ಯಭಾರ ಮಾಡುತ್ತ ಅನೇಕ ಯಜ್ಞಗಳನ್ನು ಮಾಡಿ ಒಳ್ಳೆಯ ಕೀರ್ತಿಯನ್ನು ಗಳಿಸಿದನು. ಅವನಿಗೆ ಹರಿಶ್ಚಂದ್ರನೆಂಬ ಮಗನಾದನು. ಹರಿಶ್ಚಂದ್ರನು ಯುಕ್ತವಯಸ್ಸಿಗೆ ಬಂದ ಮೇಲೆ, ತ್ರಿಶಂಕು ತನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ, ತಾನು ದೇಹದೊಂದಿಗೇ ಸ್ವರ್ಗಕ್ಕೆ ಹೋಗಬೇಕೆಂಬ ಒಂದು ಹೊಸ ನಿಶ್ಚಯಕ್ಕೆ ಬಂದನು.

ಅದಕ್ಕಾಗಿ ಅವನು ವಸಿಷ್ಠನ ಬಳಿಗೆ ಹೋಗಿ, ಆ ಮಹಾಮುನಿಗೆ ನಮಸ್ಕಾರ ಮಾಡಿ, "ಮಹಾತ್ಮಾ, ನಾನು ಈ ಶರೀರದೊಂದಿಗೇ ಸ್ವರ್ಗಕ್ಕೆ ಹೋಗಿ, ಆ ಸ್ವರ್ಗ ಸುಖಗಳನ್ನು ಅನುಭವಿಸಬೇಕೆಂದಿದ್ದೇನೆ. ಅಲ್ಲಿಯ ಅಪ್ಸರೆಯರೊಂದಿಗೆ ತಿರುಗುತ್ತ, ನಂದನೋದ್ಯಾನಗಳಲ್ಲಿ ವಿಹರಿಸುತ್ತ, ಗಾಂಧರ್ವಗಾನಗಳನ್ನು ಈ ಕಿವಿಗಳಿಂದಲೇ ಸವಿಯಬೇಕೆಂದಿದ್ದೇನೆ. ಅದಕ್ಕೆ ತಕ್ಕುದಾದ ಯಜ್ಞವೇನಾದರೂ ಇದ್ದರೆ ಮಾಡಿಸಿಕೊಡಬೇಕು" ಎಂದು ಕೇಳಿಕೊಂಡನು.

ಯಾಯಿತು. ಮಗನಿಗೆ ರಾಜ್ಯಾಭಿಷೇಕವೂ ಆಯಿತು. ಇನ್ನು ಬೆಂಕಿಯಿಂದಲೋ ವಿಷದಿಂದಲೋ ಆತ್ಮಹತ್ಯ ಮಾಡಿಕೊಂಡರೆ ಮತ್ತೆ ಬರುವ ಜನ್ಮದಲ್ಲಿ ಕೂಡಾ ದುಃಖವೇ ಬಿಡದೆ ಬೆಂಬತ್ತಿಕೊಂಡಿರುತ್ತದೆ. ಆದುದರಿಂದ ಈ ದೇಹವಿರುವವರೆಗೆ ಚಾಂಡಾಲನಾಗಿಯೇ ಬದುಕಿ ಕರ್ಮ ಫಲವನ್ನು ಅನುಭವಿಸುವುದೇ ಒಳ್ಳೆಯದು. ಹೀಗೆಂದುಕೊಂಡು ಅವನು ಗಂಗಾತೀರಕ್ಕೆ ಹೋಗಿ, ಅಲ್ಲಿ ಅರಣ್ಯದಲ್ಲೇ ವಾಸ ಮಾಡ ತೊಡಗಿದನು.

ತಂದೆಗೆ ಉಂಟಾದ ದುರ್ಗತಿ ಹರಿಶ್ಚಂದ್ರನಿಗೆ ಗೊತ್ತಾಯಿತು. ಅವನು ಗಂಗಾತೀರಕ್ಕೆ ತನ್ನ ಮಂತ್ರಿಗಳನ್ನು ಕಳುಹಿಸಿದನು. ಅವರು ತ್ರಿಶಂಕುವನ್ನು ನೋಡಿ, "ಮಹಾತ್ಮಾ, ನಿಮ್ಮ ಮಗನು ನಿಮ್ಮನ್ನು ಕರೆದುಕೊಂಡು ಬರಲು ಹೇಳಿದ್ದಾನೆ. ನೀವು ಮೊದಲಿನ ಹಾಗೆಯೇ ರಾಜ್ಯಭಾರ ಮಾಡಿಕೊಂಡಿರಬಹುದು. ವಸಿಷ್ಠರನ್ನು ಹೇಗಾದರೂ ಒಲಿತು ಮಾಡಿಕೊಳ್ಳಬಹುದು" ಎಂದರು.

"ನಾನು ಈ ಅವತಾರದಲ್ಲಿ ನಗರಕ್ಕೆ ಬರಲಾರೆ. ನನ್ನ ಮಗನೇ ರಾಜ್ಯವಾಳಿಕೊಂಡಿರಲಿ" ಎಂದು ಹೇಳಿ ಅವರನ್ನು ಹಿಂದಿರುಗಿಸಿದನು ತ್ರಿಶಂಕು. ಮಂತ್ರಿಗಳು ಹಿಂದಿರುಗಿ ತ್ರಿಶಂಕುವಿನ ಆಜ್ಞೆಯನ್ನು ಹರಿಶ್ಚಂದ್ರನಿಗೆ ಹೇಳಿದರು. ಆದರಂತೆ ಹರಿಶ್ಚಂದ್ರನೇ ರಾಜ್ಯವಾಳಿಕೊಂಡಿದ್ದನು. ತ್ರಿಶಂಕು ಜಗನ್ಮಾತೆಯನ್ನು ಧ್ಯಾನಿಸುತ್ತ ಗಂಗಾತೀರದಲ್ಲೇ ತಪಸ್ಸಿನಲ್ಲಿದ್ದನು.

ಹೀಗಿರುವಾಗ ವಿಶ್ವಾಮಿತ್ರನು ತನ್ನ ತಪಸ್ಸನ್ನು ಪೂರ್ತಿ ಮಾಡಿ ತನ್ನ ಹೆಂಡತಿ ಮಕ್ಕಳನ್ನು ನೋಡಲು ಆಶ್ರಮಕ್ಕೆ ಹೊರಟನು. ಆಗ ಅವನಿಗೆ ಒಂದೇ ಸಮನೆ ಹಸಿವಾಗ ತೊಡಗಿತು. ತಾನು ತಪಸ್ಸು ಮಾಡಿಕೊಂಡಿದ್ದಾಗ ಬರಗಾಲಬಂದ ಸಂಗತಿ ಅವನಿಗೆ ಗೊತ್ತಿತ್ತು. ಅದು ಇನ್ನೂ ಇರುವಂತಿದೆ. ತನ್ನ ಹೆಂಡತಿ ಮಕ್ಕಳು ಹೇಗೆ ಅದನ್ನು ತಡೆದುಕೊಂಡಿರುವರೋ ಅವನಿಗೆ ತಿಳಿಯದು. ಆ ಯೋಚನೆ ಬಂದಾಗ ಅವನ ಹಸಿವೆ ಇನ್ನಿಷ್ಟು ಹೆಚ್ಚಿತು. ದಾರಿಯಲ್ಲಿ ಒಬ್ಬ ಚಾಂಡಾಲನ ಮನೆಯನ್ನು ಪ್ರವೇಶಿಸಿ, ಆಹಾರಕ್ಕಾಗಿ ಅವನ ಮನೆಯ ಗಡಿಗೆಯೊಳಗೆ ಕೈ ಹಾಕಿ ಅದರಲ್ಲಿ ಸಿಕ್ಕಿದನ್ನು ತಿನ್ನುವಾಗಲೇ ಚಾಂಡಾಲನ ಕಣ್ಣಿಗೆ ಬಿದ್ದನು. ವಿಶ್ವಾಮಿತ್ರನು ಚಾಂಡಾಲನೊಂದಿಗೆ ತಪಸ್ವಿಯಾದ ತಾನು ಹಸಿವೆಯನ್ನು ತಾಳಲಾಗದೆ ಕಳ್ಳತನದಿಂದ ಸಿಕ್ಕಿದ್ದನ್ನು ತಿಂದೆನೆಂದನು.



"ಅಯ್ಯಾ, ಇದು ನಾಯಿ ಮಾಂಸ. ನೀವು ಅಧರ್ಮಕ್ಕೆ ಕೈ ಹಾಕಿದಿರಿ" ಎಂದನು ಚಾಂಡಾಲ.

"ಹಸಿವೆ ಧರ್ಮವನ್ನು ನೋಡದು. ನಾನು ಇದನ್ನು ತಿಂದುದು ಅಧರ್ಮವಾದರೆ ಅದರ ದೋಷ ಮೇಘದೇವನದು!" ಎಂದನು ವಿಶ್ವಾಮಿತ್ರ.

ವಿಶ್ವಾಮಿತ್ರನು ಹಾಗೆ ಹೇಳಿದ ಕೂಡಲೇ ಆನೆಯ ಸೊಂಡಿಲುಗಾತ್ರದ ಧಾರೆಗಳಿಂದ ಮಳೆ ಸುರಿಯಿತು.

ವಿಶ್ವಾಮಿತ್ರನು ಅಲ್ಲಿಂದ ಹೊರಟು ಮನೆಗೆ ಬಂದನು. ಹೇಗೆ ದಿನ ಕಳೆದಿರೆಂದು ಗಂಡನು ಕೇಳಿದಾಗ, ತ್ರಿಶಂಕು ತಮ್ಮನ್ನು ಹೇಗೆ ಕಾಪಾಡಿದನೆಂಬ ಸಂಗತಿಯನ್ನು ಹೆಂಡತಿ ಹೇಳಿದಳು. ತ್ರಿಶಂಕು ತಮಗಾಗಿಯೇ ವಸಿಷ್ಠನ ಶಾಪಕ್ಕೆ ಒಳಗಾದನೆಂಬ ಸಮಾಚಾರ ತಿಳಿದು ವಿಶ್ವಾಮಿತ್ರನ ಮನಸ್ಸು ತ್ರಿಶಂಕುವಿನ ಕಡೆಗೆ ತಿರುಗಿತು. ಕೂಡಲೇ ವಿಶ್ವಾಮಿತ್ರನು ತ್ರಿಶಂಕುವನ್ನು ಹುಡುಕುತ್ತಾ ಹೋಗಿ, ಅವನನ್ನು ನೋಡಿ, "ರಾಜಾ, ನೀನು ನನ್ನ ಹೆಂಡತಿಗೂ ಮಕ್ಕಳಿಗೂ ಉಪಕಾರಮಾಡಿರುವೆ. ನಾನು ನಿನಗೆ ಪ್ರತ್ಯುಪಕಾರ ಮಾಡಲು ಬಂದಿದ್ದೇನೆ. ನಿನಗಾಗಿ ಏನು ಮಾಡಲಿ ?" ಎಂದನು.

ತ್ರಿಶಂಕು ವಸಿಷ್ಠನನ್ನು ಕೇಳಿದಂತೆಯೇ ತನ್ನನ್ನು ಮರ್ತ್ಯಶರೀರದೊಂದಿಗೆ ಸ್ವರ್ಗಕ್ಕೆ ಕಳುಹಿಸುವಂತೆ ವಿಶ್ವಾಮಿತ್ರನನ್ನು ಕೇಳಿಕೊಂಡನು.

ಆಗಲೆಂದು ಹೇಳಿ ವಿಶ್ವಾಮಿತ್ರನು ಮೊದಲು ವಸಿಷ್ಠನ ಶಾಪವನ್ನು ತೊಲಗಿಸಲು ನೋಡಿದನು. ಅದಕ್ಕಾಗಿ ಯಜ್ಞ ಮಾಡಲು ಹವಣಿಸಿದಾಗ, ವಸಿಷ್ಠನು ಯಾವ ಮುನಿಗಳೂ ಯಜ್ಞಕ್ಕೆ ಹೋಗದಂತೆ ತಡೆ ವಿಧಿಸಿದನು.

ಆಗ ವಿಶ್ವಾಮಿತ್ರನು ತನ್ನ ತಪಃಶಕ್ತಿಯನ್ನೆಲ್ಲಾ ತ್ರಿಶಂಕುವಿಗೆ ಧಾರೆಯೆರೆದುಕೊಟ್ಟು, "ಇನ್ನು ನೀನು ಸ್ವೇಚ್ಛೆಯಾಗಿ ಸ್ವರ್ಗಕ್ಕೆ ಹೋಗು, ನಿನ್ನನ್ನು ಯಾರೂ ತಡೆಯಲಾರರು!" ಎಂದನು. ವಿಶ್ವಾಮಿತ್ರನು ಕೊಟ್ಟ ತಪಃಶಕ್ತಿಯಿಂದ ತ್ರಿಶಂಕು ಹಕ್ಕಿಯು ಹಾಗೆ ಹಾರುತ್ತ ಸ್ವರ್ಗದವರೆಗೂ ಹೋದನು. ಚಾಂಡಾಲನ ಆಕಾರದಲ್ಲಿರುವ ಮನುಷ್ಯನೊಬ್ಬ ಸ್ವರ್ಗಕ್ಕೆ ಬರುವುದನ್ನು ನೋಡಿ, ದೇವತೆಗಳು ಇಂದ್ರನೊಂದಿಗೆ ಆ ಸಂಗತಿ ಹೇಳಿದರು. ಇಂದ್ರನು ಓಡಿ ಬಂದು ತ್ರಿಶಂಕುವನ್ನು ಅಡ್ಡಗಿಸಿ, "ಚಾಂಡಾಲನಾದ ನೀನು ಸ್ವರ್ಗಕ್ಕೆ ಹೇಗೆ ಬರುತ್ತೀ?" ಎಂದು ಹೇಳಿ ತ್ರಿಶಂಕುವನ್ನು ದೂಡಿಬಿಟ್ಟರು.

ತ್ರಿಶಂಕು ಭೂಮಿಯ ಕಡೆಗೆ ಬೀಳುತ್ತ, "ದೇವತೆಗಳು ನನ್ನನ್ನು ಸ್ವರ್ಗದಿಂದ ದೂಡಿದರು !" ಎಂದು ಗಟ್ಟಿಯಾಗಿ ಕೂಗಿದನು.

ಕೂಡಲೇ ವಿಶ್ವಾಮಿತ್ರನು ತನ್ನ ಅಪಾರವಾದ ತಪಃಶಕ್ತಿಯಿಂದ ತ್ರಿಶಂಕುವನ್ನು ಮಧ್ಯಾಕಾಶದಲ್ಲೇ ನಿಲ್ಲಿಸಿ ಕೆಳಗೆ ಬೀಳದಂತೆ ಮಾಡಿದನು. ಅಷ್ಟು ಮಾತ್ರವಲ್ಲದೆ ತ್ರಿಶಂಕುವಿಗಾಗಿಯೇ ಮತ್ತೊಂದು ಸ್ವರ್ಗಲೋಕವನ್ನು ಸೃಷ್ಟಿಸಿ ಕೊಟ್ಟನು. ಈ ಸಂಗತಿ ಇಂದ್ರನಿಗೆ ಗೊತ್ತಾಯಿತು. ಅವನು ವಿಶ್ವಾಮಿತ್ರನ ಬಳಿಗೆ ಬಂದು ಹೊಸ ಸ್ವರ್ಗವನ್ನು ಉಪಸಂಹರಿಸಿಕೊಳ್ಳುವಂತೆ ಹೇಳಿ, ತ್ರಿಶಂಕುವಿಗೆ ಹೊಸ ಶರೀರವನ್ನು ಕೊಟ್ಟು, ತನ್ನೊಂದಿಗೆ ತನ್ನ ಸ್ವರ್ಗಕ್ಕೇ ಕರೆದುಕೊಂಡು ಹೋದನು.





# ಮೊಸೋಗುಂಡಯ್ಯ

ಒಂದು ಊರಿನಲ್ಲಿ ಕಮಲೆ ಎಂಬ ಹುಡುಗಿ ಇದ್ದಳು. ಅವಳು ದಿನಾ ದೇವಾಲಯಕ್ಕೆ ಹೋಗಿ ಬರುವುದು ವಾಡಿಕೆ. ಅದರಂತೆ ಒಂದು ದಿನ ಅವಳು ದೇವಾಲ ಯಕ್ಕೆ ಹೋಗಿ ಮನೆಗೆ ಬರುವಾಗ, ಅವಳ ತಂದೆ ಯಾದ ರಾಮಯ್ಯ ಯಾರೊಂದಿಗೋ ಮಾತಾಡಿ ಕೊಂಡಿದ್ದನು. "ಇವಳೇ ನನ್ನ ಮಗಳು" ಎಂದು ಆಗಂತುಕರೊಂದಿಗೆ ಹೇಳಿದನು ರಾಮಯ್ಯ. ಕಮಲೆ ಅವರಿಗೆ ನಮಸ್ಕಾರಮಾಡಿ ಒಳಗೆ ಹೋದಳು.

ರಾಮಯ್ಯನೊಂದಿಗೆ ಮಾತಾಡುತ್ತಿದ್ದವರು ತಂದೆಯೂ ಮಗನೂ ಎಂದು ತಿಳಿಯಿತು. ಯುವಕ ನಾದ ಆ ಮಗನನ್ನು ಕಮಲೆ ಎರಡು ತಿಂಗಳ ಹಿಂದೆ ಅವಳ ಗೆಳತಿಯ ಮದುವೆಗೆ ಹೋದಲ್ಲಿ ನೋಡಿದ್ದಳು. ಆಗ ಅವನು ಮದುಮಗನ ಗೆಳೆಯನಾಗಿ ಓಡಾಡಿ ಕೊಂಡಿದ್ದನು. ಮದುವೆ ಮುಗಿಯುವವರೆಗೂ ಮನೆ ಪೂರಾ ಅವನದೇ ಓಡಾಟವಾಗಿತ್ತು. ಅವನ ಹೆಸರು ರವಿ ಎಂತಲೂ ಕಮಲೆಗೆ ಗೊತ್ತಾಗಿತ್ತು.

ಕಡೆಗೆ ರಾಮಯ್ಯ ಒಳಗೆಬಂದು, "ಅವರು ಬಹು ದೊಡ್ಡ ಮನುಷ್ಯರು. ಅವರ ಮಗ ನಮ್ಮ ಕಮಲೆ ಯನ್ನು ಎಲ್ಲೋ ನೋಡಿ ಇಷ್ಟಪಟ್ಟಿದ್ದಾನಂತೆ. ಅದಕ್ಕೆ ತಂದೆಯನ್ನು ಕರೆದುಕೊಂಡು ಬಂದಿದ್ದಾನ. ಆದರೆ ತಂದೆ ಕಡೇಪಕ್ಷ ಹತ್ತು ಸಾವಿರ ವರದಕ್ಷಿಣೆ ಕೊಡ ಬೇಕು ಅನ್ನುತ್ತಾರೆ. ಅದು ನಮಗೆ ಕೈ ಮೀರಿದ ಮಾತು. ಅವರಿಗಿಷ್ಟು ತಿಂಡಿತೀರ್ಥ ಕೊಟ್ಟು ಕಳುಹಿಸಿ ಬಿಡೋಣ" ಎಂದನು, ಮಗಳಿಗೂ ಕೇಳುವ ಹಾಗೆ ಹೆಂಡತಿಯೊಂದಿಗೆ.

ಆಮೇಲೆ ಕಮಲೆ ತಿಂಡಿಗಳನ್ನು ತಟ್ಟೆಗಳಲ್ಲಿ ತೆಗೆದುಕೊಂಡು ಹೊರಗೆ ಬಂದು ಬಂದವರಿಗೆ ಕೊಟ್ಟಳು. ಕಮಲೆಗೆ ರವಿಯನ್ನು ಮದುವೆಯಾಗಲು ತುಂಬ ಇಷ್ಟವಿತ್ತು. ಆದರೆ ಹತ್ತು ಸಾವಿರವನ್ನು ತಂದೆ ಎಲ್ಲಿಂದ ತಂದು ಸುರಿದಾರು ?

ರಾಮಯ್ಯನು ಅವರೊಂದಿಗೆ ತಾನು ಹತ್ತು ಸಾವಿರ ಕೊಡಲು ಸಾಧ್ಯವಾಗದೆಂದು ಸ್ಪಷ್ಟವಾಗಿ ಹೇಳಿ, ಕಳುಹಿಸಿಕೊಟ್ಟನು. ಅವರೊಂದಿಗೆ ಬೀದಿಯ ತುದಿಯ ವರೆಗೂ ಹೋಗಿ ಹಿಂದಿರುಗಿದಾಗ ಅವನ ಮನಸ್ಸುಬದಲಾಗಿ ಹೋಯಿತು. "ಕಾಲ ಬುಡಕ್ಕೇ ಬಂದ ಒಳ್ಳೇ ಸಂಬಂಧವನ್ನು ಬಿಟ್ಟು ಬಿಡಬಾರದು. ಏನು ಕಮಲಾ, ಹುಡುಗ ನಿನಗೆ ಹಿಡಿಸಿದರೆ ಮದುವೆ ಮಾಡಿ ಬಿಡೋಣವೆಂದಿದ್ದೇನೆ" ಎಂದನು.

ಎಂ. ಕೆ. ಈಶ್ವರರಾವ್



ಕಮಲೆಯನ್ನು ಹೆಂಗಸರು ಮದುಮಗಳನ್ನಾಗಿ ಅಲಂಕರಿಸಿಕೊಂಡಿರುವಾಗ, ದೊಡ್ಡ ಮನುಷ್ಯ ರೊಬ್ಬರು ಒಳಗೆಬರುತ್ತ, "ಎಲ್ಲಿ ನಮ್ಮ ಹುಡುಗ, ಆರಿಸಿಕೊಂಡ ಹುಡುಗಿ? ನೋಡಬೇಕಲ್ಲ ನಾನು?" ಎಂದು ಕೇಳಿದರು. ಅವರಿಗೆ ದಪ್ಪವಾದ ಗಿರಿಜಾ ಮೀಸೆಗಳಿದ್ದುವು. ಗಂಭೀರ ವಿಗ್ರಹ.

"ತಾವು ಹುಡುಗನಿಗೆ ಏನಾಗಬೇಕು?" ಎಂದು ಯಾರೋ ವಿನಯದಿಂದ ಕೇಳಿದರು. ಅವರು ನಗುತ್ತ, "ನಾನೋ? ಗುಂಡಯ್ಯ ಅಂತ ನನ್ನ ಹೆಸರು. ಮೀಸೇ ಗುಂಡಯ್ಯ ಅಂತಲೂ ಕರೀತಾರೆ. ನಿಮ್ಮ ಮದುಮಗನಿಗೆ ನಾನು ತಂದೆಗೆ ಸಮಾನ. ನಾನು ಊರಲ್ಲಿರಲಿಲ್ಲ. ಮೊನ್ನೆ ತಾನೇ ಬಂದೆ." ಎಂದರು ಮೀಸೇ ಗುಂಡಯ್ಯ.

ಕಮಲೆ ಅವರ ಪಾದಕ್ಕೆ ಅಡ್ಡಬಿದ್ದು ಆಶೀರ್ವಾದ ಪಡೆದಳು. ಗಂಡಿನ ಕಡೆಯ ಹಿರಿಯರೆಂದು ಗೊತ್ತಾದಕೂಡಲೇ, ಅವರಿಗೆ ಕಾಫೀ ತಿಂಡಿಗಳನ್ನು ಕೊಟ್ಟು ಉಪಚರಿಸಿದನು ರಾಮಯ್ಯ.

ಅಲ್ಲಿಂದ ಹೊರಬಿದ್ದ ಮೀಸೇ ಗಂಡಯ್ಯ ನೆಟ್ಟಗೆ ಪಟೇಲರಲ್ಲಿಗೆ ಹೋಗಿ, ಅಲ್ಲಿ ಇಳಿದಿದ್ದ ಗಂಡಿನವರ ನಡುವೆ ತೂರಿ, "ಎಲ್ಲಿ ನೋಡೋಣ ನಮ್ಮ ಹುಡುಗಿಯ ಆರಿಕೆ ಹೇಗಿದೆಯೋ? ನಿನ್ನೆ ತಾನೇ ನಾನು ಊರಿಗೆ ಬಂದೆ. ನನ್ನ ಹೆಸರು ಗುಂಡಯ್ಯ. ಮದುಮಗಳು ನನಗೆ ಮಗಳಿದ್ದ ಹಾಗೆ. ಎಲ್ಲಿ ಹುಡುಗ?" ಎಂದರು.

ಮದುಮಗ ರವಿಯ ತಂದೆ ರಾಜಯ್ಯ ಮೀಸೇ ಗುಂಡಯ್ಯನಿಗೆ ಗೌರವತೋರಿಸಿ, ರವಿಯನ್ನು ಕರೆದು, "ನಿನ್ನ ದೊಡ್ಡ ಮಾವನವರು" ಎಂದು ಪರಿಚಯ ಮಾಡಿಸಿದನು.

ಆಮೇಲೆ ಮೀಸೇ ಗುಂಡಯ್ಯನದೇ ಕಾರುಬಾರು. ಗಂಡಿನ ಮನೆಗೂ ಹೆಣ್ಣಿನ ಮನೆಗೂ ನಡುವೆ ತಿರುಗುತ್ತ, ಎರಡೂ ಕಡೆಯವರೊಂದಿಗೆ ಅಧಿಕಾರ

"ಮತ್ತೆ ವರದಕ್ಷಿಣೆ?" ಎಂದು ಥಕ್ಕನೆ ಕೇಳಿದಳು ಕಮಲೆ. "ಆ ವಿಷಯ ನೋಡಿಕೊಳ್ಳುತ್ತೇನೆ ಬಿಡು. ಈ ವರ ನಿನಗೆ ಹಿಡಿಸಿದ್ದಾನೆಂದು ನಿನ್ನ ಮುಖ ನೋಡಿದ ಕೂಡಲೇ ಗೊತ್ತಾಗುತ್ತದೆ. ಈ ಸಂಬಂಧ ವನ್ನೇ ಗಟ್ಟಿ ಮಾಡುತ್ತೇನೆ" ಎಂದನು ರಾಮಯ್ಯ.

ರಾಮಯ್ಯ ಹೇಳಿದ ಹಾಗೆಯೇ ರವಿಯ ಸಂಬಂಧ ವನ್ನೇ ಮಾತಾಡಿ ಗಟ್ಟಿ ಮಾಡಿದನು. ನಿಶ್ಚಯ ತಾಂಬೂಲ ವಿನಿಮಯವಾಯಿತು. ಹದಿನೈದು ದಿನ ಗಳಲ್ಲಿ ವಿವಾಹದ ಮುಹೂರ್ತ ದಿನವೂ ನಿಶ್ಚಯ ವಾಯಿತು. ವರದಕ್ಷಿಣೆಯ ಅಷ್ಟು ಮೊತ್ತವನ್ನು ತಂದೆ ಹೇಗೆ ಸರಿಹೊಂದಿಸುವರೆಂಬು ಕಮಲೆಗಾಗಲೀ ಅವಳ ತಾಯಿಗಾಗಲೀ ಗೊತ್ತಾಗಲಿಲ್ಲ. ಕೇಳಿದರೆ ಹಾರಿಸಿ ಮಾತಾಡುತ್ತಿದ್ದನು ರಾಮಯ್ಯ.

ಮದುವೆಯ ಮುಹೂರ್ತ ರಾತ್ರಿಯಲ್ಲಿ. ಗಂಡಿನ ಕಡೆಯವರು ಬಂದು ಸೇರಿದರು. ಅವರಿಗೆ ಪಟೇಲರ ಮನೆಯಲ್ಲಿಯೇ ಬಿಡದಿಯ ಏರ್ಪಾಡಾಗಿತ್ತು.

ವಾಣಿ ಹೊರಡಿಸುತ್ತ ಆ ಮದುವೆಯನ್ನು ನಡೆಸಿ ಕೊಡುವ ಮುಂದಾಳಾದರು. ಅವರು ನಿಜಕ್ಕೂ ಯಾರ ಕಡೆಯವರೆಂಬುದನ್ನು ನಿರ್ಧರಿಸಿ ಕೊಳ್ಳುವ ಗೊಡವೆಗೆ ಯಾರೂ ಹೋಗಲಿಲ್ಲ. ಒಟ್ಟಿನ ಮೇಲೆ ಅವರು ಎರಡು ಪಕ್ಷದವರಿಗೂ ಹಿತ ಚಿಂತಕರಾಗಿ, ಮದುವೆಯ ಹಿರಿತನ ನಡೆಸುವವರಾಗಿದ್ದರು. ಎರಡು ಕಡೆಯವರೂ ಅವರ ಮಾತಿಗೆ ಬೆಲೆ ಕೊಡುತ್ತಿದ್ದರು. ಅವರನ್ನು ಕೇಳಿಯೇ ಸಂದೇಹ ಲೋಪದೋಷ ಗಳನ್ನು ನಿವೃತ್ತಿ ಮಾಡಿಕೊಳ್ಳುತ್ತಿದ್ದರು.

ಆ ದಿನ ಸಾಯಂಕಾಲ ಗಂಡಿನವರ ಬಿಡದಿಯಲ್ಲಿ ರಾಜಯ್ಯ ನಾಲ್ಕು ಮಂದಿಗಳೊಂದಿಗೆ ಮಾತಾಡು ತ್ತಿದ್ದಾಗ ಮೀಸೇ ಗುಂಡಯ್ಯ, "ಬಾವಯ್ಯ, ಸ್ವಲ್ಪ ಹೀಗೆ ಬರುತ್ತೀರಾ? ವರದಕ್ಷಿಣೆ ವಿಷಯ ಮಾತಾಡ ಬೇಕಾಗಿದೆ" ಎಂದರು.



ವರದಕ್ಷಿಣೆ ಎಂಬ ಮಾತು ಕಿವಿಗೆ ಬೀಳುತ್ತಲೇ ರಾಜಯ್ಯ ತಟ್ಟನೆ ಎದ್ದು ಬಂದನು. ಇಬ್ಬರೂ ಒಳಗಿನ ಕೋಣೆಯೊಳಗೆ ಹೋದರು.

"ನನ್ನ ತಮ್ಮ ನಿಮ್ಮ ವರದಕ್ಷಿಣೆ ಹಣ..." ಎನ್ನುವಾಗ ಮಾತು ಪೂರ್ತಿಯಾಗುವ ಮೊದಲೇ ಗುಂಡಯ್ಯನಿಗೆ ತೀವ್ರವಾದ ಕೆಮ್ಮು ಹತ್ತಿಕೊಂಡಿತು. ತೆರೆದೆರೆಯಾಗಿ ಕೆಮ್ಮುತ್ತ ನೀರುಬೇಕೆಂದು ರಾಜಯ್ಯ ನಿಗೆ ಸನ್ನೆ ಮಾಡಿದರು. ರಾಜಯ್ಯ ಆಚೆಗೆ ಹೋಗಿ ತಂಬಿಗೆಯಲ್ಲಿ ನೀರು ತುಂಬಿಕೊಂಡು, ಬೇಗ ಬೇಗನೆ ಹುಡುಕಿ ಒಂದು ಲೋಟೆ ಎತ್ತಿಕೊಂಡು ಕೋಣೆ ಯೊಳಗೆ ಹಿಂದಿರುಗಿ ಬಂದನು.

ಮೀಸೇ ಗುಂಡಯ್ಯ ನೀರು ಕುಡಿದು ಕೆಮ್ಮ ಕೆನೆದು ಸರಿಮಾಡಿಕೊಂಡು, "ವರದಕ್ಷಿಣೇ ಈಗಲೇ ತರಬಹುದಾ ಅಂತ ನನ್ನ ತಮ್ಮನು ಕೇಳುತ್ತಾನೆ. ವಿಚಾರಿಸಿ ಹೇಳುತ್ತೇನೆ ಅಂತ ಬಂದೆ" ಎಂದರು.

"ಪರವಾಗಿಲ್ಲ. ಈಗಲೇ ತರಲಿ," ಎಂದನು ರಾಜಯ್ಯ ಆತುರದಿಂದ. ಮೀಸೇ ಗುಂಡಯ್ಯ ಅಲ್ಲಿಂದ ಹೆಣ್ಣಿನ ಮನೆಗೆ ಬಂದು, ನಾಲ್ಕು ಜನರ ನಡುವೆ ಮಾತಾಡಿಕೊಂಡಿದ್ದ ರಾಮಯ್ಯನನ್ನು ನೋಡಿ, "ಸ್ವಲ್ಪ ಹೀಗೆ ಬರುವಿರಾ ಬಾವಯ್ಯಾ? ಮುಖ್ಯ ವಿಷಯ" ಎಂದು ಬದಿಗೆ ಕರೆದರು. ರಾಮಯ್ಯ ಸುತ್ತಲೂ ಇರುವ ಜನರನ್ನು ನೋಡಿ, ಮೀಸೇ ಗುಂಡಯ್ಯನನ್ನು ಒಳಗೋಣೆಗೆ ಕರೆದು ಕೊಂಡು ಹೋದನು. ಮತ್ತೆ ಸ್ವಲ್ಪ ಹೊತ್ತಿನ ಮೇಲೆ ರಾಮಯ್ಯ ಕೋಣೆಯಿಂದ ಹೊರಗೆ ಬಂದು, "ನೀರು! ನೀರು! ಗುಂಡಯ್ಯನಿಗೆ ಒಂದೇ ಕೆಮ್ಮು! ಬೇಗ ನೀರು ತಾರಪ್ಪಾ" ಎಂದು ಯಾರಿಂದಲೋ ನೀರು ತರಿಸಿಕೊಂಡು ಮತ್ತೆ ಕೋಣೆಯೊಳಗೆ ಹೋದನು.

ಸ್ವಲ್ಪ ಹೊತ್ತು ಕಳೆದ ಮೇಲೆ ಮೀಸೇ ಗುಂಡಯ್ಯ ಹೊರಗೆ ಬಂದು, ಎಲ್ಲರ ಇದಿರಿನಲ್ಲಿಯೇ ಕೆಮ್ಮುವನ್ನು ಕೆನೆದು ಸರಿಮಾಡಿಕೊಳ್ಳುತ್ತ ಮನೆ ಯಿಂದ ಹೊರಗೆ ಹೋದರು. ಇನಿಷ್ಟು ಹೊತ್ತಾದ



ಯಿಂದ ರಾಜಯ್ಯ ಕೂಗಾಡುತ್ತಾ ಬಂದನು. "ಎಲ್ಲಿ ಆ ಮೀಸೇ ಗುಂಡಯ್ಯ? ನನ್ನ ಹಣ ಐದು ಸಾವಿರ ರೂಪಾಯಿ ಕದ್ದುಕೊಂಡಿದ್ದಾನೆ ಕೆಮ್ಮಿದ ನಟನೆ ಮಾಡಿ ಆ ದೊಡ್ಡ ಮನುಷ್ಯ. ಎಲ್ಲಿದ್ದಾನೆ ಆ ನಿಮ್ಮ ಅಣ್ಣ?" ಇದು ರಾಜಯ್ಯನ ಬಾಯಿಯಿಂದ ಹೊರಟ ಮಾತು.

"ಆತ ನಿಮ್ಮ ಅಣ್ಣಾ ಅಂದನಲ್ಲಾ? ನನ್ನ ಹತ್ತು ಸಾವಿರದ ಚೀಲವನ್ನೇ ಹಾರಿಸಿಕೊಂಡು ಹೋದ ನಲ್ಲಾ!" ಎಂದು ಕೂಗಿದ ರಾಮಯ್ಯ. ಆಗ ತಾನೇ ಮೀಸೇ ಗುಂಡಯ್ಯ ಆ ಇಬ್ಬರ ಕಡೆಯ ಮನುಷ್ಯನೂ ಅಲ್ಲವೆಂದು ಇಬ್ಬರಿಗೂ ಗೊತ್ತಾಯಿತು. ಅವನಿಗಾಗಿ ಯುವಕರು ನಾಲ್ಕಾರು ಬೀದಿಗಳಲ್ಲಿ ಓಡಾಡಿ, ತಿರುಗಿ ಬಂದು ಅವನ ಜಾಡು ಎಲ್ಲಿಯೂ ಕಾಣುವುದಿಲ್ಲ ವೆಂದು ಹೇಳಿಬಿಟ್ಟರು.

ರವಿ ತನ್ನ ತಂದೆಯನ್ನು ಬದಿಗೆ ಕರೆದು, "ವರದಕ್ಷಿಣೇ ಮಾತು ಬೇಡ ಅಂದರೆ ನೀವು ಕೇಳಲಿಲ್ಲ. ಈಗ ನಡೆದ ಗಲಾಟೆ ನೋಡಿದಿರಪ್ಪೆ? ನಿಮಗಿರುವ ಹಣದ ಆಸೆಯ ವಾಸನೆ ಹಿಡಿದು ಆ ಮೀಸೇಯವನು ವರದಕ್ಷಿಣೇ ಹೆಸರಿನಲ್ಲಿ ನಿಮ್ಮನ್ನು ಹಣದ ಪೆಟ್ಟಿಗೆಯ ಕೋಣೆಗೆ ಹೋಗುವ ಹಾಗೆ ಮಾಡಿ ಐದು ಸಾವಿರದ ಚೀಲ ಕದ್ದುಬಿಟ್ಟ. ಪುಣ್ಯವಶಾತ್ ಪೆಟ್ಟಿಗೆಯ ಅಡೀ ಭಾಗದಲ್ಲಿದ್ದ ಇಪ್ಪತ್ತೈದು ಸಾವಿರವೂ, ಆಭರಣಗಳೂ ಅವನ ಕಣ್ಣಿಗೆ ಬೀಳಲಿಲ್ಲ, ಈಗಲೇ ನಾವು ಸಾಕಷ್ಟು ನಗುವಿನ ಪಾಲಿಗೆ ಬಿದ್ದೆವು. ಇನ್ನು ವರದಕ್ಷಿಣೆ ಮಾತುಬೇಡ. ಮದುವೆ ನಿಲ್ಲಿಸಿದರೂ ನಮ್ಮ ಮುಖಕ್ಕೆ ಮಂಗಳಾರತಿಯೇ" ಎಂದನು.

ಹುಡುಗಿಯ ಮೇಲೆ ಮಗನ ಮನಸ್ಸು ಅಂಟಿ ಹೋಗಿರುವುದನ್ನು ಅರಿತ ರಾಜಯ್ಯ "ಸರಿಯಪ್ಪಾ ಸರಿ" ಎಂದನು. ಪುರೋಹಿತರು "ಮುಹೂರ್ತ ಸಮೀಪಿಸುತ್ತಿದೆ" ಎಂದರು. "ಎಲ್ಲಾ ಶಾಂತರಾಗಿರಿ.

ಮೇಲೆ, ಕೋಣೆಯೊಳಗಿದ್ದ ರಾಮಯ್ಯ ಕೋಪ ಸಂತಾಪಗಳಿಂದ ಕೂಗುವುದನ್ನು ಕೇಳಿ ಎಲ್ಲರೂ ಅಲ್ಲಿಗೆ ಹೋಗಿ ಮುತ್ತಿದರು.

ರಾಮಯ್ಯನು ಪೆಟ್ಟಿಗೆಯ ಮುಂದೆ ಕುಳಿತು ಕೊಂಡು ಅದರೊಳಗಿದ್ದುದನ್ನೆಲ್ಲಾ ಗಾಬರಿಯಿಂದ ಈಚೆಗೆ ಎಳೆದು ಹಾಕುತ್ತಿದ್ದನು.

"ಹತ್ತು ಸಾವಿರದ ಗಂಟು! ವರದಕ್ಷಿಣೇ ಹಣ! ಈಗಲೇ ಕಳುಹಿಸಿ ಬಿಡಬೇಕೆಂದು ಹೇಳಿ ಕಳಿಸಿದ್ದಾರೆ. ಗುಂಡಯ್ಯನೇ ಸ್ವತಃ ಬಂದು ಹೇಳಿ ಹೋದರು. ಅವರ ಹೊರತು ಈ ಕೋಣೆಗೆ ಮತ್ತೆ ಯಾರೂ ಬರಲಿಲ್ಲ. ಅಯ್ಯೋ! ಎಂಥಾ ಮೋಸ! ಕೆಮ್ಮಿದ ನಟನೆ ಮಾಡಿ ನನ್ನನ್ನು ಹೊರಗೆ ಕಳಿಸಿ ಆ ಚೀಲ ವನ್ನೇ ಎತ್ತಿಕೊಂಡು ಹೋಗಿದ್ದಾನೆ! ಕಳ್ಳ! ಆತನನ್ನು ಹಿಡೀರಿ!" ಎಂದು ಕೂಗಿದನು ರಾಮಯ್ಯ.

ಎಲ್ಲರೂ ಮೀಸೇ ಗುಂಡಯ್ಯನನ್ನು ಹುಡುಕುವ ಗಡಿಬಿಡಿಯಲ್ಲಿ ತೊಡಗಿರುವಾಗ, ಗಂಡಿನವರ ಬಿಡದಿ

ಮಂಗಳಕಾರ್ಯ ಮುಂದುವರಿಯಲಿ" ಎಂದು ಯಾರೋ ಹಂದೇದನಿಯಿಂದ ಕೂಗಿದರು. ಸರಿಯಾದ ಮುಹೂರ್ತದಲ್ಲಿ ಮದುವೆ ನೆರವೇರಿತು.

ಎಲ್ಲಾ ಮುಗಿದ ಮೇಲೆ ಗಂಡಿನವರು ನಾಲ್ಕು ಜಟಕಾಗಾಡಿಗಳಲ್ಲಿ ತಮ್ಮ ಊರಿಗೆ ಹೊರಟರು. ಹೋಗುವಾಗ ಆ ಗಾಡಿಯಲ್ಲಿ ಕಮಲೆ ರವಿ ಯೊಂದಿಗೆ, "ಆ ಮೀಸೆ ಆಸಾಮಿ ಎಂತಹ ಮೋಸ ಮಾಡಿ ಬಿಟ್ಟ ನೋಡಿದಿರಾ? ಅಪ್ಪನ ಹಣ ಮಾತ್ರ ವಲ್ಲದೆ ಮಾವಯ್ಯನದೂ ಹೋಯಿತೆಂದರೆ ನನಗೆ ತುಂಬಾ ಚಿಂತೆಯಾಗಿದೆ!" ಎಂದಳು.

ರವಿ ನಗುತ್ತ, "ಯಾರ ಹಣವೂ ಹೋಗಲಿಲ್ಲ. ಅದೆಲ್ಲಾ ನಾನೂ ನಿನ್ನ ಅಪ್ಪನೂ ಆಲೋಚಿಸಿ ಮಾಡಿದ ಒಂದು ಕೆಲಸ. ಅಪ್ಪನಿಗೆ ಹಣಕ್ಕೇನೂ ಕಡಿಮೆಯಿಲ್ಲದಿದ್ದರೂ ಖಂಡಿತ ವರದಕ್ಷಿಣೆ ಬೇಕೇ ಬೇಕೆಂದರು. ನಿನ್ನ ಅಪ್ಪ ನಮ್ಮನ್ನು ಬೀದಿ ಕೊನೇ ವರೆಗೆ ಕಳುಹಿಸಲು ಬಂದಾಗ, ನನ್ನ ಅಪ್ಪ ಗಾಡಿ ಯವನೊಂದಿಗೆ ತಗಾದೆ ಮಾಡುವ ಸಮಯ ನೋಡಿ, ನಾನೇ ನಿನ್ನ ಅಪ್ಪನನ್ನು ಬದಿಗೆ ಕರೆದು ಈ ಉಪಾಯವನ್ನು ಹೇಳಿದೆ. ಅವರು ಸುಲಭದಲ್ಲಿ ಒಪ್ಪಲಿಲ್ಲ ಅನ್ನು. ಆ ಮೀಸೆ ಗುಂಡಯ್ಯ ಅಂದರೆ ನನಗೆ ಪರಿಚಯದವನೇ. ಅವನು ತನ್ನ ಮಗಳ ಮದುವೆಗಾಗಿ ನನ್ನ ಅಪ್ಪನ ಹತ್ತಿರ ಸಾಲಕೇಳಿದ್ದ; ಅಪ್ಪ ಕೊಡಲಾಗುವುದಿಲ್ಲ ಅಂದರು. ನಾನು ಆದಕ್ಕೆ ಮೊದಲೇ ಪೆಟ್ಟಿಗೆಯಿಂದ ಐದು ಸಾವಿರವನ್ನು ತೆಗೆದು ಗುಟ್ಟಾಗಿ ಮೀಸೆಯಾತನಿಗೆ ಕೊಟ್ಟಿದ್ದೆ. ಆ ಮೀಸೆಯವನು ತನ್ನ ಮೇಲೆ ಎಲ್ಲರಿಗೂ ಅನುಮಾನ ಬರಬೇಕೆಂತಲೇ ಕೆಮ್ಮಿದ ನೆವನ ತೆಗೆದುಕೊಂಡನು. ನಿನ್ನ ಅಪ್ಪನ ಹತ್ತಿರ ವರದಕ್ಷಿಣೆ ಹಣ ಅಂತ ಎಲ್ಲಿತ್ತು? ತನ್ನ ಐದು ಸಾವಿರ ಕಳವಾದುದರಿಂದ, ನಿನ್ನಪ್ಪ ಹೇಳಿದ್ದು ಕೇಳಿ ವರದಕ್ಷಿಣೆ ಹಣವೂ ಹೋಯಿ ತೆಂದೇ ನಂಬಿದರು," ಎಂದನು.

"ಎಷ್ಟು ಒಳ್ಳೆಯವರಪ್ಪ ನೀವು! ವರದಕ್ಷಿಣೆಯೇ ಬೇಡವೆಂದು ನನ್ನನ್ನು ಮಾಡಿಕೊಂಡಿರಿ! ಪಾಪ, ಇದಕ್ಕೆ ಸಹಾಯಮಾಡಿದ ಆ ಮೀಸೇಯವರು ಲೋಕದ ದೃಷ್ಟಿಯಲ್ಲಿ ಕಳ್ಳರು ಅಂತ ಆದರಲ್ಲಾ!" ಎಂದಳು ಕಮಲ.

"ಆ ಮೀಸೇಯವರು ಹುಚ್ಚರೇನಲ್ಲ. ಅವರ ನಿಜವಾದ ಹೆಸರು ಭೀಮಯ್ಯಾ ಅಂತ. ಆ ಮೀಸೆ ಇಟ್ಟುಕೊಂಡ ಮೀಸೆ. ನಾಟಕದಲ್ಲಿ ಪಾತ್ರ ವಹಿಸುವವರಾದ್ದರಿಂದ ಕಂಠಸ್ವರ ಕೂಡಾ ಬದಲಾಯಿಸಿ ರಾಗದಶೈಲಿ ಹಿಡಿದು ಮಾತಾಡುವ ಸಾಮರ್ಥ್ಯ ಉಳ್ಳವರು. ಅವರ ಮಗನಿಗೆ ಉದ್ಯೋಗ ದೊರಕಿದ ಕೂಡಲೇ ನಮ್ಮ ಐದು ಸಾವಿರ ಕೊಟ್ಟುಬಿಡುತ್ತಾರೆ," ಎಂದನು ರವಿ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೦ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**







P. Sundaram — Azmat A. Syed

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಅಕ್ಟೋಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಯಾ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಆಗಸ್ಟ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: **ನನ್ನ ರಾಗ ಹೇಗಿದೆ?**

ಎರಡನೇ ಫೋಟೋ : **ನಮ್ಮ ಅನುರಾಗ ಅದಕ್ಕಿಂತ ಮೇಲಿದೆ**

ಕಳುಹಿಸಿದವರು : **ಪಿ. ಶ್ರೀನಿವಾಸರಾವ್,**

ನ್ಯೂ ಉಡ್‌ಲಾಂಡ್ಸ್ ಹೋಟಲ್, ತ್ರಿಪುನಿತ್ತುರ, ಕೇರಳ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.






**Results of Chandamama—Camlin Colouring Contest No. 15 (Kannada)**

*1st Prize:* Mahabaleshwara B. L., Davanagere-1. *2nd Prize:* Praveen Kumar, Kasargod. *3rd Prize:* B. Prashantha, Perla. *Consolation Prizes:* Veena Shetty, Mangalore-4; H. Ganesh Mallya, Pattan; Ganesh V. G., Perla, V. Vatsala, Bangalore-560 010; Miss Padma Shankar Kamate, Khadakhat.

# ಕಣ್ಣುಗಳನ್ನು ಮುಚ್ಚಿ ನಿಮಗೇನು ಬೇಕೆಂದು ನಿರ್ಧರಿಸಿ.



ಉಳಿತಾಯ ಮಾಡಿದರೆ ಬಯಕೆಗಳು ಈಡೇರುತ್ತವೆ. ಒಂದು ಸೈಕಲ್ಲೇ? ಒಂದು ಗೊಂಬೆಗಳ ಮನೆಯೇ? ಹೊಸ ಆಟದ ಸಾಮಾನೇ? ನಿಮ್ಮ ಹಣದಿಂದಲೇ ಖರೀದಿಸಬಹುದು. ಕೆನರಾ ಬ್ಯಾಂಕಿನ **ಬಾಲಕ್ಷೇಮ** ಠೇವಣಿ ಯೋಜನೆ ನಿಮಗಾಗಿ ಇದೆ. ಬೀಗದ ಕೈಯುಳ್ಳ ಸುಂದರವಾದ **ಬಾಲಕ್ಷೇಮ** ಉಳಿತಾಯ ಪೆಟ್ಟಿಗೆಯಲ್ಲಿ ನಾಣ್ಯಗಳ ಮೇಲೆ ನಾಣ್ಯಗಳನ್ನು ಶೇಖರಿಸಿ. ಪೆಟ್ಟಿಗೆ ತುಂಬಿದೊಡನೆ ಕೆನರಾ ಬ್ಯಾಂಕಿನಲ್ಲಿ ಜಮಾ ಮಾಡಿ ನಾಣ್ಯ ಸಂಗ್ರಹಣೆ ಪುನರಾರಂಭಿಸಿ. ನಾವೂ ಅದಕ್ಕೆ ಸೇರಿಸುವ ಕಾರಣ ನಿಮ್ಮ ಹಣ ಬೆಳೆಯುತ್ತದೆ. ಕೂಡಲೇ, ನಿಮಗೆ ಬೇಕಾದ್ದನ್ನು ಕೊಳ್ಳುವಷ್ಟು ದೊಡ್ಡದಾಗುತ್ತದೆ.

ನಿಮ್ಮ ಬಯಕೆ ಈಡೇರಲು ಎಂತಹ ಚಮತ್ಕಾರ! ಉಳಿತಾಯದ ಪಾಠಕ್ಕೆ ಎಂತಹ ಅದ್ಭುತ ಮಾರ್ಗ!

ಹೆಚ್ಚಿನ ವಿವರಗಳಿಗೆ ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆಗೆ ಭೇಟಿ ನೀಡಿ. ಕಾಮಧೇನು, ವಿದ್ಯಾನಿಧಿ ಮತ್ತು ನಿರಂತರ ನಮ್ಮ ಇತರ ವಿಶೇಷ ಯೋಜನೆಗಳು.

**ಬಾಲಕ್ಷೇಮ ಠೇವಣಿ ಯೋಜನೆ**




## ಕೆನರಾ ಬ್ಯಾಂಕ್




(ಒಂದು ರಾಷ್ಟ್ರೀಕೃತ ಬ್ಯಾಂಕ್)

(ರಾಷ್ಟ್ರದಾದ್ಯಂತ)

1,200 ಕ್ಕೂ ಹೆಚ್ಚು ಶಾಖೆಗಳು

CHANDAMAMA (Kannada) OCTOBER 1980 Regd. No. M. 5210